CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಮಾರ್ಚ್ ೩, ೨೦೦೫ (ಫಾಲ್ಗುಣ ೧೨, ಶಕ ವರ್ಷ ೧೯೨೬) | ಸಂಚಿಕೆ ೯ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪ ವಿಭಾಗ-2 ಬಿಜಾಪುರ
### ಪ್ರಕರಣ ಸಂಖ್ಯೆ:ಕಾಅಬ:ಕಾನಪ:ಮಪ್ರ:ಎಸ್‌ಆರ್-213/2004 ದಿನಾಂಕ: 23ನೇ ಡಿಸೆಂಬರ್ 2004

**ಅರ್ಜಿದಾರರು:**

1. ಚಂದ್ರಕಾಂತ ಉರ್ಫ್ ಚಂದುಸಾ ತಂದೆ ದುರಗುಸಾ ರಾಯಬಾಗಿ
2. ಶಶಿಕಲಾ ಉರ್ಫ್ ಯಲ್ಲಮ್ಮ ಗಂಡ ಚಂದ್ರಕಾಂತ ಉರ್ಫ್ ಚಂದುಸಾ ರಾಯಬಾಗಿ ವಾಸ:ಡಬ್ಲ್ಯೂ ನಂ.6, ವೆವರ್ ಸೊಸೈಟಿ ಹತ್ತಿರ, ಇಳಕಲ್: ತಾ.ಹುನಗುಂದ, ಜಿ.ಬಾಗಲಕೋಟೆ ಸದ್ಯದವಾಸ: ಯಲಗೂರ ತಾ.ಬಿ. ಬಾಗೇವಾಡಿ ಜಿ. ಬಿಜಾಪುರ

ವಿರುದ್ಧ **ಪ್ರತಿವಾದಿಗಳು:**

1. ರಾಜನಸಾ ತಂದೆ ಶ್ರೀಕಾಂತಸಾ ರಾಜೊಳ್ಳಿ ವಾಸ:ವೆಜಿಟೇಬಲ್ ಮಾರ್ಕೆಟ್ (ಕಮೀಷನ್ ಏಜೆಂಟ್) ಇಳಕಲ್ ತಾ: ಹುನಗುಂದ, ಜಿ. ಬಾಗಲಕೋಟೆ
2. ದಿ ಬ್ರ್ಯಾಂಚ್ ಮ್ಯಾನೇಜರ್ ನ್ಯೂ ಇಂಡಿಯಾ ಅಸೂರೆನ್ಸ್ ಕಂ.ಲಿ., ಬಿಜಾಪುರ.

**ಪ್ರಕಟಣೆ**

ಶ್ರೀ: ಶ್ರೀಮತಿ: 1) ಚಂದ್ರಕಾಂತ ಉರ್ಫ್ ಚಂದುಸಾ ತಂದೆ ದುರಗುಸಾ ರಾಯಬಾಗಿ 2) ಶಶಿಕಲ ಉರ್ಫ್ ಯಲ್ಲಮ್ಮ ಗಂಡ ಚಂದ್ರಕಾಂತ ಉರ್ಫ್ ಚಂದುಸಾ ರಾಯಬಾಗಿ ಇವರುಗಳಾದ ತಾವು ಮೃತ ಸಂತೋಷ ಇವರ ತಂದೆ ಮತ್ತು ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಸಂತೋಷ ಇವರು ಒಂದನೇ ಪ್ರತಿವಾದಿಗಳಾದ ರಾಜನಸಾ ತಂದೆ ಶ್ರೀಕಾಂತಸಾ ರಾಜೊಳ್ಳಿ ಇವರ ಮಹಿಂದ್ರಾ ಮಿನಿ-ಡೋರ್ ಪಿಕಪ್ ವ್ಯಾನ್ ನಂ.ಕೆಎ-29:5503 ರಲ್ಲಿ ಕೂಲಿ: ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಜಿ. ಸಿದ್ದಲಿಂಗಪ್ಪ ಅಲೂರು
ಕಾರ್ಮಿಕ ನಷ್ಟ, ಪರಿಹಾರ ಆಯುಕ್ತರು, ಉಪ ವಿಭಾಗ-2 ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್.41

### ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ ಕೋಲಾರ
### ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:32:2004

**ಅರ್ಜಿದಾರರು:**

1. ಲಕ್ಷ್ಮಿ ನರಸಮ್ಮ ಅಲಿಯಾಸ್ ಈಶ್ವರಮ್ಮ 20 ವರ್ಷ ಕೋಂ ಲೇಟ್ ವೆಂಕಟರವಣಪ್ಪ

ವಿರುದ್ಧ **ಪ್ರತಿವಾದಿಗಳು:**

1. ಶ್ರೀ ಈರಪ್ಪ ಬಿನ್ ಲೇಟ್ ಚಿಕ್ಕರಾಮಣ್ಣ ಪೆದ್ದರಾಜಪಲ್ಲಿ ವಿಲೇಜ್, ಪಾಯಲಕೆರೆ ಅಂಚೆ, ಬಾಗೇಪಲ್ಲಿ ತಾಲ್ಲೂಕು.

2. ಕದಿರಮ್ಮ ಕೋಂ ಕದಿರಪ್ಪ 60 ವರ್ಷ
ಎ. ಕೆ. ಕಾಲೋನಿ, ಪಾಯಲಕೆರೆ, ಚೇಳೂರು
ಹೋಬಳಿ, ಬಾಗೇಪಲ್ಲಿ ತಾ:

2. ಮೆ: ಯುನೈಟೆಡ್ ಇಂಡಿಯಾ ಇನ್‌ಷೂರೆನ್ಸ್ ಕಂಪನಿ ಲಿಮಿಟೆಡ್, ಶಾಖಾ ಕಛೇರಿ, ಅಂಚೆ ಪೆಟ್ಟಿಗೆ ಸಂಖ್ಯೆ: 16, 1ನೇ ಮಹಡಿ, ಎಸ್‌ಬಿಎಲ್‌ಟಿ ಬಿಲ್ಡಿಂಗ್, ಪಾಲಿಟೆಕ್ನಿಕ್ ರಸ್ತೆ, ಚಿಂತಾಮಣಿ, ಕೋಲಾರ ಜಿಲ್ಲೆ.

**ಅಧಿಸೂಚನೆ**

ಅರ್ಜಿದಾರರಾದ ಲಕ್ಷ್ಮಿನರಸಮ್ಮ ಅಲಿಯಾಸ್ ಈಶ್ವರಮ್ಮ ಅವರು ತಮ್ಮ ಗಂಡ ಶ್ರೀ ವೆಂಕಟರವಣಪ್ಪ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಈರಪ್ಪ ಬಿನ್ ಲೇಟ್ ಚಿಕ್ಕರಾಮಪ್ಪ ರವರ ಬಳಿ ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 21.07.2004 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 17.12.2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**
ಪಿ.ಆರ್.44 ಕಾರ್ಮಿಕ ನಷ್ಟ, ಪರಿಹಾರ ಆಯುಕ್ತರು, ಕೋಲಾರ ಜಿಲ್ಲೆ, ಕೋಲಾರ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ ದಾವಣಗೆರೆ ಜಿಲ್ಲೆ, ದಾವಣಗೆರೆ ಪ್ರ.ಸಂ:ಕಾಅಧಾ:ಕಾನಪ:ಸಿಆರ್-346/04 ದಿನಾಂಕ:28ನೇ ಡಿಸೆಂಬರ್ 2004

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ರತ್ನಮ್ಮ ಕೋಂ ಲೇ ಶಿವಣ್ಣ
2. ರೂಪ ಆರ್. ಎಸ್. D/o ಲೇ ಶಿವಣ್ಣ
ವಿಳಾಸ: ಗಾಂಧಿನಗರ ದಾವಣಗೆರೆ

1. ಎಂ. ಬಸವರಾಜಪ್ಪ ಬಿನ್ ನಾಗೇಂದ್ರಪ್ಪ ಟ್ರಾಕ್ಟರ್ ಮಾಲೀಕರು ನಂ.ಕೆ.ಎ.16/7879-3374 ಗೋಡಬನಹಳ್ಳಿ ಚಿತ್ರದುರ್ಗ ತಾ:
2. ದಿ. ಬ್ರಾಂಚ್ ಮ್ಯಾನೇಜರ್ ನ್ಯಾಷನಲ್ ಇನ್ಸೂರೆನ್ಸ್ ಕಂ ಲಿ. ಚಿತ್ರದುರ್ಗ.

**ಪ್ರಕಟಣೆ**

ಶ್ರೀ:ಶ್ರೀಮತಿ ರತ್ನಮ್ಮ ಕೋಂ ಲೇ ಶಿವಣ್ಣ ರೂಪ ಆರ್. ಎಸ್. ಇವರುಗಳಾದ ತಾವು ಮೃತ ಶಿವಣ್ಣ ಇವರ ಹೆಂಡತಿ ಮತ್ತು ಮಗಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಶಿವಣ್ಣ ರವರು ಒಂದನೇ ಪ್ರತಿವಾದಿಗಳಾದ ಎಂ. ಬಸವರಾಜಪ್ಪ ಇವರ ಟ್ರಾಕ್ಟರ್ ರಲ್ಲಿ ಲೋಡರ್ ಮತ್ತು ಅನ್ ಲೋಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ. ಹೆಚ್. ಹಿರೇಗೌಡರ್**
ಪಿ.ಆರ್.45 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ ದಾವಣಗೆರೆ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ ಕೋಲಾರ ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ-33:2004

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1. ಯಾಮಣ್ಣ ಬಿನ್ ಲೇಟ್ ಮುನಿಸ್ವಾಮಪ್ಪ
2. ಜಯಲಕ್ಷ್ಮಮ್ಮ ಕೋಂ ಯಾಮಣ್ಣ
ದೊಡ್ಡರಹಳ್ಳಿ ವಿಲೇಜ್, ಹೊಸಕುಂಡ್ ಅಂಚೆ,
ಬಂಗಾರಪೇಟೆ ತಾಲ್ಲೂಕು, ಕೋಲಾರ ಜಿಲ್ಲೆ.

1. ಜೆ. ಕೆ. ಸುರೇಶ್ ಬಿನ್ ಜಯರಾಮಪ್ಪ ಕಿಲಾರಿಪೇಟ್, ಕೋಲಾರ-563101
2. ಯುನೈಟೆಡ್ ಇಂಡಿಯಾ ಇನ್‌ಷೂರೆನ್ಸ್ ಕಂಪನಿ ಲಿಮಿಟೆಡ್, ಬಾಗಲೂರು ಮ್ಯಾನ್‌ಷನ್, ದೊಡ್ಡಪೇಟೆ ಕೋಲಾರ-563101.

**ಅಧಿಸೂಚನೆ**

ಅರ್ಜಿದಾರರಾದ ಯಾಮಣ್ಣ ಬಿನ್ ಲೇಟ್ ಮುನಿಸ್ವಾಮಪ್ಪ ಅವರು ತಮ್ಮ ಮಗನಾದ ಶ್ರೀ ಗೋಪಾಲಪ್ಪ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಜೆ. ಕೆ. ಸುರೇಶ್ ರವರ ಬಳಿ ಚಾಲಕ: ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 21.11.2004 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 17.12.2004 ರಂದು ನೀಡಲಾಗಿದೆ.

ಜಿ. ಚಿಕ್ಕಣ್ಣ

ಪಿ.ಆರ್.46 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಕೋಲಾರ ಜಿಲ್ಲೆ, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ ಕೋಲಾರ**
**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ-34:2004**

**ಅರ್ಜಿದಾರರು:**

1. ದಾಸಪ್ಪ ಬಿನ್ ಚೆನ್ನರಾಯಪ್ಪ 50 ವರ್ಷ
2. ವೆಂಕಟಲಕ್ಷ್ಮಮ್ಮ ಅಲಿಯಾಸ್ ರವಣಮ್ಮ ಕೋಂ ದಾಸಪ್ಪ 40 ವರ್ಷ ಕೊಟ್ಟಪಲ್ಲಿ ವಿಲೇಜ್, ರೊಣೂರ್ ಹೋಬಳಿ, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀನಿವಾಸ್ ಬಿನ್ ಅಕ್ಕಲಪ್ಪ ರೊಣೂರು ವಿಲೇಜ್ ಅಂಚೆ, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ.
2. ನ್ಯಾಷನಲ್ ಇನ್‌ಷೂರೆನ್ಸ್ ಕಂ. ಲಿ., ಶ್ರೀರಾಮ್ ಸ್ಟೇಟ್ ಆಫೀಸ್, 2ಎ ಪ್ರಕಾಶಂ ರಸ್ತೆ, ಟಿ. ನಗರ, ಚೆನ್ನೈ-600017, ತಮಿಳುನಾಡು.

**ಅಧಿಸೂಚನೆ**

ಅರ್ಜಿದಾರರಾದ ದಾಸಪ್ಪ ಬಿನ್ ಚೆನ್ನರಾಯಪ್ಪ ಅವರು ತಮ್ಮ ಮಗನಾದ ಶ್ರೀ ಮಂಜುನಾಥ್ ಅವರು 1ನೇ ಪ್ರತಿವಾದಿ ಶ್ರೀ:ಶ್ರೀಮತಿ ಶ್ರೀನಿವಾಸ್ ಬಿನ್ ಅಕ್ಕಲಪ್ಪ ರವರ ಬಳಿ ಕ್ಲೀನರ್: ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 30.10.2004 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 17.12.2004 ರಂದು ನೀಡಲಾಗಿದೆ.

ಜಿ. ಚಿಕ್ಕಣ್ಣ

ಪಿ.ಆರ್.47 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಕೋಲಾರ ಜಿಲ್ಲೆ, ಕೋಲಾರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**
**ಪ್ರಕರಣ ಸಂ:ಕಾನಪ:ಪ್ರ:ಎಫ್-21/2004 ದಿನಾಂಕ: 26ನೇ ನವೆಂಬರ್ 2004**

**ಅರ್ಜಿದಾರರು:**

1. ಭಜನ್‌ಕೌರ್ 2. ಅನುರಾಗಸಿಂಗ್
3. ರಮಣ್ ದೀಪ್‌ಕೌರ್ 4. ಬಲ್‌ಬೀರ್ ಸಿಂಗ್

ಎಲ್ಲರೂ ವಾಸ: ಚಿತ್ರದುರ್ಗ

**ವಿರುದ್ಧ**

**ಪ್ರತಿವಾದಿಗಳು:**

1. ಸುಖದೇವ ಸಿಂಗ್ ಲಾರಿ ಮಾಲೀಕರು ಥಾಣಾ ಜಿಲ್ಲೆ, ಮಹಾರಾಷ್ಟ್ರ
2. ರಾಜ್ಯ ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ. ಚೆಂಬೂರ್ ಮುಂಬೈ

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ: ಭಜನ್‌ಕೌರ್ ಇತರರು ಇವರು, ತಾವು ಮೃತ ಜಸ್ವಂತ್ ಸಿಂಗ್ ಇವರ ಹೆಂಡತಿ ಮತ್ತು ಮಕ್ಕಳು, ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಜಸ್ವಂತ್‌ಸಿಂಗ್ ಇವರು ಒಂದನೇ ಪ್ರತಿವಾದಿಗಳಾದ ಸುಖದೇವ್‌ಸಿಂಗ್ ಇವರಲ್ಲಿ "ಡ್ರೈವರ್" ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಜಿ. ಗೋವಿಂದಯ್ಯ

ಪಿ.ಆರ್.48 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

**ಅಧಿಸೂಚನೆ ಸಂಖ್ಯೆ: ಎಲ್‌ಆರ್‌ಎಫ್:ಸಿಆರ್-56/04-05 ದಿನಾಂಕ: 27ನೇ ನವೆಂಬರ್ 2004**

**ವಿಷಯ :** ಮೌಲಾನಾ ಸೈಯ್ಯದ್ ಹುಸೇನ್ ಅಹಮದ್, ಮದನಿ ಎಜುಕೇಷನಲ್ ಅಂಡ್ ಚಾರಿಟೇಬಲ್ ಟ್ರಸ್ಟ್, ನಂ. 32 "ಬಿ", ನಂ. 4ನೇ ಬೀದಿ, ಚಾಂದಿನಿ ವೃತ್ತ ರಸ್ತೆ, ಬೆಂಗಳೂರು 05 ರವರು ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಪಂಡಿತನ ಅಗ್ರಹಾರ ಗ್ರಾಮದ, ಸರ್ವೆ ನಂ. 94/1 ಮತ್ತು 94/2 ರಲ್ಲಿ 6.20 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಅನುಮತಿ ಕೋರಿರುವ ಬಗ್ಗೆ.

**ಉಲ್ಲೇಖ :** ವಿಶೇಷ ಜಿಲ್ಲಾಧಿಕಾರಿಗಳವರ ಸ್ಥಳ ಪರಿಶೀಲನಾ ವರದಿ ದಿನಾಂಕ: 23.11.2004 ರ ಆದೇಶ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖದ ಆದೇಶದಂತೆ.

ಮೌಲಾನಾ ಸೈಯ್ಯದ್ ಹುಸೇನ್ ಅಹಮದ್, ಮದನಿ ಎಜುಕೇಷನಲ್ ಅಂಡ್ ಚಾರಿಟೇಬಲ್ ಟ್ರಸ್ಟ್ ನಂ. 32 "ಬಿ", ನಂ. 4ನೇ ಬೀದಿ, ಚಾಂದಿನಿ ವೃತ್ತ ರಸ್ತೆ, ಬೆಂಗಳೂರು 05 ರವರು ಆನೇಕಲ್ ತಾಲ್ಲೂಕು ಸರ್ಜಾಪುರ ಹೋಬಳಿ, ಪಂಡಿತನ ಅಗ್ರಹಾರ ಗ್ರಾಮದ, ಸರ್ವೆ ನಂ. 94/1 ಮತ್ತು 94/2 ರಲ್ಲಿ 6.20 ಎಕರೆ: ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರಡಿ ದಾನವಾಗಿ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ 15ಎ ಮತ್ತು ನಮೂನೆ 15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗ ರವರ ಪತ್ರ ಸಂ:ಎಲ್‌ಆರ್‌ಎಫ್ (109) ಸಿಆರ್:13/04-05, ದಿನಾಂಕ: 26.10.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 94/1 ಮತ್ತು 94/2 ರಲ್ಲಿ 6.20 ಎಕರೆ:ಗುಂಟೆ ಜಮೀನನ್ನು ದಾನವಾಗಿ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I)(II)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪ ನೋಂದಣಾಧಿಕಾರಿಗಳ ಕಛೇರಿ, ಶಿವಾಜಿನಗರ, ಉಪನೋಂದಣಾ ಕಛೇರಿಯಲ್ಲಿ ದಿನಾಂಕ: 30.3.2004 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ದಾನವಾಗಿ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕಾಗಿ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 63, 79ಎ 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಜಿಲ್ಲೆ, ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ ಪಂಡಿತನ ಅಗ್ರಹಾರ ಗ್ರಾಮದ, ಸರ್ವೆ ನಂ. 94/1 ಮತ್ತು 94/2 ರಲ್ಲಿ 6.20 ಎಕರೆ:ಗುಂಟೆ ಜಮೀನನ್ನು ಮೌಲಾನಾ ಸೈಯ್ಯದ್ ಹುಸೇನ್ ಅಹಮದ್, ಮದನಿ ಎಜುಕೇಷನಲ್ ಅಂಡ್ ಚಾರಿಟೇಬಲ್ ಟ್ರಸ್ಟ್, ನಂ. 32 "ಬಿ", ನಂ. 4ನೇ ಬೀದಿ, ಚಾಂದಿನಿ ವೃತ್ತ ರಸ್ತೆ, ಬೆಂಗಳೂರು-05 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ಸಂ: ವ್ಯಾಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 ರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 2 ಯೂನಿಟ್‌ಗಳಿದ್ದು ಈ ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಪ್ರಸ್ತಾಪಿತ ಜಮೀನು ದಾನವಾಗಿ ಪಡೆಯಲು ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೇ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಫೇಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾವಣೆ ಮಾಡಬಾರದು.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯ ಹಾಗೂ ಕೈಗಾರಿಕಾ ಉದ್ದೇಶಕ್ಕೆ ಉಪಯೋಗಿಸಿಕೊಳ್ಳಲು ಭೂ ಬದಲಾವಣೆಯ ಬಗ್ಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರುವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿಯು ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಗಳಡಿ ಅಗತ್ಯತೆ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್.49 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ ಪತ್ರ ನಂ: ಎಲ್‌ಆರ್‌ಎಫ್:ಸಿಆರ್-70/03-04 ದಿನಾಂಕ: 8ನೇ ಡಿಸೆಂಬರ್ 2004

**ವಿಷಯ :** ಸೊಸೈಟಿ ಆಫ್ ಸಿಸ್ಟರ್ಸ್ ಆಫ್ ದಿ ರೆಡೆಂಪಷನ್, ನಂ. 7, 1ನೇ ಎ ಮುಖ್ಯರಸ್ತೆ, 8ನೇ ಬ್ಲಾಕ್, ಕೋರಮಂಗಲ, ಬೆಂಗಳೂರು-95, ರವರು ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ ಚೊಕ್ಕಸಂದ್ರ ಗ್ರಾಮದ ಸ.ನಂ.43/4 ಮತ್ತು 44/1 ರಲ್ಲಿ 3-22.5 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನವಾಗಿ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಸೊಸೈಟಿ ಆಫ್ ಸಿಸ್ಟರ್ಸ್ ಆಫ್ ದಿ ರೆಡೆಂಪಷನ್, ನಂ. 7, 1ನೇ ಎ ಮುಖ್ಯರಸ್ತೆ, 8ನೇ ಬ್ಲಾಕ್, ಕೋರಮಂಗಲ, ಬೆಂಗಳೂರು-95, ರವರು ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಚೊಕ್ಕಸಂದ್ರ ಗ್ರಾಮದ ಸ.ನಂ.43/4 ಮತ್ತು 44/1 ರಲ್ಲಿ 3-22.5 ಎಕರೆ:ಗುಂಟೆ ಜಮೀನನ್ನು ಸಂಸ್ಥೆಯ ಸಿಸ್ಟರ್‌ಗಳಿಗೆ ತರಬೇತಿ ನೀಡುವ ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನವಾಗಿ ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಬೆಂಗಳೂರು ಉತ್ತರ ತಾಲ್ಲೂಕು, ರವರ ಪತ್ರದ ನಂ. ಎಲ್‌ಆರ್‌ಎಫ್ (80) ಸಿಆರ್-32/3-04 ದಿನಾಂಕ: 28.07.2004 ರಲ್ಲಿ ಪ್ರಸ್ತಾಪಿತ ಗ್ರಾಮಗಳ ಸ.ನಂ.43/4 ಮತ್ತು 44/1 ರಲ್ಲಿ 3-22.5 ಎಕರೆ: ಗುಂಟೆ ಜಮೀನನ್ನು ದಾನವಾಗಿ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I)(II)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಕರ್ನಾಟಕ ಸಹಕಾರ ಸಂಘಗಳ ನೋಂದಣಿ ಇಲಾಖೆ, ಬೆಂಗಳೂರು ರವರ ಕಛೇರಿಯಲ್ಲಿ ದಿನಾಂಕ: 30.4.1979 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ದಾನವಾಗಿ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರ ಪ್ರಕಾರ ಸದರಿಯ ಸದಸ್ಯರುಗಳಿಗೆ ಶೈಕ್ಷಣಿಕ ತರಬೇತಿ ನೀಡುವ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961ರ ಕಲಂ 63, 79ಎ 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ ಚೊಕ್ಕಸಂದ್ರ ಗ್ರಾಮದ, ಸ.ನಂ:43/4 ರಲ್ಲಿ 0-30.5 ಗುಂಟೆ ಮತ್ತು 44/1 ರಲ್ಲಿ 2-32 ಎಕರೆ:ಗುಂಟೆ ಒಟ್ಟು 3-22.05 ಎಕರೆ:ಗುಂಟೆ ಜಮೀನನ್ನು ಸೊಸೈಟಿ ಆಫ್ ಸಿಸ್ಟರ್ಸ್ ಆಫ್ ದಿ ರೆಡೆಂಪಷನ್, ನಂ.7, 1ನೇ ಎ ಮುಖ್ಯರಸ್ತೆ, 8ನೇ ಬ್ಲಾಕ್, ಕೋರಮಂಗಲ, ಬೆಂಗಳೂರು-95, ರವರಿಗೆ ಸಂಸ್ಥೆಯ ಸಿಸ್ಟರ್‌ಗಳಿಗೆ ತರಬೇತಿ ನೀಡುವ ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ. ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಫೇಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಭೂ ಬದಲಾವಣೆಯ ಅವಶ್ಯಕತೆ ಇದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯತೆ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್.50 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ.

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ ಸಂ:ನಅಇ 22 ಗುಅಪ್ರಾ 2004 ಬೆಂಗಳೂರು ದಿನಾಂಕ: 15ನೇ ಡಿಸೆಂಬರ್ 2004

**ವಿಷಯ :** ಹುಮ್ನಾಬಾದ್ ಪಟ್ಟಣದ ಸ್ಥೂಲಾಭಿವೃದ್ಧಿ ಯೋಜನೆಗಳಿಗೆ ಸಂಬಂಧಿಸಿದಂತೆ ಹಾಲಿ ಭೂ ಉಪಯೋಗ ನಿರ್ಧರಣೆ ಹಾಗೂ ಸ್ಥೂಲಾಭಿವೃದ್ಧಿ ಯೋಜನೆ ತಯಾರಿಸುವ ಬಗ್ಗೆ.

ಹುಮ್ನಾಬಾದ್ ಪುರಸಭಾ ಯೋಜನೆ ಪ್ರಾಧಿಕಾರವು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 10 ರನ್ವಯ ಹುಮ್ನಾಬಾದ್ ಪಟ್ಟಣಕ್ಕೆ ಸ್ಥಳೀಯ ಯೋಜನಾ ಪ್ರದೇಶಕ್ಕೆ ಸ್ಥೂಲಾಭಿವೃದ್ಧಿ ಯೋಜನೆಯನ್ನು ತಯಾರಿಸಲು ಉದ್ದೇಶಿಸಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರ ಸಲಹೆ ಮತ್ತು ಸೂಚನೆಗಳನ್ನು ಖುದ್ದಾಗಿ ಅಥವಾ ನೊಂದಾಯಿತ ಅಂಚೆಯ ಮೂಲಕವಾಗಲೀ ಪ್ರಾಧಿಕಾರ ಕಛೇರಿಯಲ್ಲಿ ಅರವತ್ತು ದಿನಗಳೊಳಗಾಗಿ ಸ್ವೀಕರಿಸಲಾಗುತ್ತದೆ.

| | |
|---|---|
| ಸಹಿ | ಸಹಿ |
| ಮುಖ್ಯಾಧಿಕಾರಿಗಳು, | ಅಧ್ಯಕ್ಷರು, |
| ಪುರಸಭಾ ಯೋಜನಾ ಪ್ರಾಧಿಕಾರ, ಹುಮ್ನಾಬಾದ್ ಪಟ್ಟಣ | ಪುರಸಭಾ ಯೋಜನಾ ಪ್ರಾಧಿಕಾರ, ಹುಮ್ನಾಬಾದ್ ಪಟ್ಟಣ |

'ದೃಢೀಕರಿಸಿದೆ'

**ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

### ಅಧಿಸೂಚನೆ ಸಂ:ನಅಇ 22 ಗುಅಪ್ರಾ 2004 ಬೆಂಗಳೂರು ದಿನಾಂಕ: 15ನೇ ಡಿಸೆಂಬರ್ 2004

(ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯಿದೆ 1961ರ ಪ್ರಕರಣ 5ರ ಅಡಿಯಲ್ಲಿ) ಹುಮ್ನಾಬಾದ್ ಸ್ಥಳೀಯ ಯೋಜನಾ ಪ್ರದೇಶದ ಹಾಲಿ ಭೂ ಉಪಯೋಗಗಳ ನಿರ್ಧರಣಾ ದಿನಾಂಕವನ್ನು ದಿನಾಂಕ: 15.6.2001 ಎಂದು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.51 **ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ನಿಯಮ 441 ರನ್ವಯ ವಸೂಲಾಧಿಕಾರಿ, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-4 ಇವರ ನಡವಳಿಕೆಗಳು

**ಸನಿವ/ಯಾ.ಸ್ಥಿರೀಕರಣ/2004-05:420/04-05/6769 ದಿನಾಂಕ: 15ನೇ ಡಿಸೆಂಬರ್ 2004**

**ವಿಷಯ :** ಶ್ರೀಮತಿ ಷಂಷದ್ ಬೇಗಂ, ಕೋಂ ಅನ್ವರ್ ಬಾಷಾ (ಎಂ. ಕೆ. ಇಂಡಸ್ಟ್ರೀಸ್) ನೆಹರು ನಗರ, ಹೊಳಲ್ಕೆರೆ ರಸ್ತೆ, ಚಿತ್ರದುರ್ಗ ಮತ್ತು ಇತರರು ಸಿ.ಇ.ಪಿ. ನಂ.1/1997-98ರ, ಇವರ ಸ್ಥಿರಾಸ್ತಿಯ ಮಾರಾಟದ ಸ್ಥಿರೀಕರಣದ ಬಗ್ಗೆ.

**ಉಲ್ಲೇಖ :** ಮಾರಾಟಾಧಿಕಾರಿ, ಚಿತ್ರದುರ್ಗ, ಶಾಖೆ ಇವರ ಪತ್ರ ಕ್ರ.ಸಂ.ಕೆಆರ್‌ಕೆ: ಎಸ್‌ಬಿ:ಎಸ್‌ಎಂಜಿ:100:2004-05 ದಿನಾಂಕ: 17.5.04

**ಪ್ರಸ್ತಾವನೆ:**

ಶ್ರೀಮತಿ ಷಂಷದ್ ಬೇಗಂ ಕೋಂ ಅನ್ವರ್ ಬಾಷ (ಎಂ. ಕೆ. ಇಂಡಸ್ಟ್ರೀಸ್), ನೆಹರು ನಗರ, ಹೊಳಲ್ಕೆರೆ ರಸ್ತೆ, ಚಿತ್ರದುರ್ಗ ಜಿಲ್ಲೆ ಮತ್ತು ಇತರರು, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ., ಚಿತ್ರದುರ್ಗ ಶಾಖೆಯಿಂದ ಸಾಲ ಪಡೆದು ಸಕಾಲದಲ್ಲಿ ಅಸಲು ಮತ್ತು ಬಡ್ಡಿಯನ್ನು ಮರುಪಾವತಿಸದ ಕಾರಣ ಸದರಿ ಸುಸ್ತಿದಾರರ ಮೇಲೆ ಸಹಕಾರ ಸಂಘಗಳ ಕಾಯ್ದೆಯಡಿ ಸಂಬಂಧಪಟ್ಟ ಅಧಿಕಾರಿಗಳ ನ್ಯಾಯಾಲಯದಲ್ಲಿ ದಾವೆ ಹೂಡಿ ಸುಸ್ತಿಸಾಲ ವಸೂಲಾತಿಗಾಗಿ ಸದರಿಯವರ ವಿರುದ್ಧ ದಿನಾಂಕ: 25.11.1996 ರಂದು ಅವಾರ್ಡ್ ನಂ. ಆರ್‌ಸಿಎಸ್:ಡಿಎಸ್:ಡಿ5:1235: 1994-95 ರೀತ್ಯ ಡಿಕ್ರಿ ಪಡೆದಿರುತ್ತಾರೆ. ಡಿಕ್ರಿಯಾದ ನಂತರವು ಬಾಕಿದಾರರು ಸಾಲ ಮರುಪಾವತಿ ಮಾಡದ ಕಾರಣ ಡಿಕ್ರಿದಾರ ಬ್ಯಾಂಕ್ ಸದರಿಯವರ ವಿರುದ್ಧ ಅಮಲ್ಜಾರಿ ಆದೇಶ ಸಂಖ್ಯೆ: ಸಿ.ಇ.ಪಿ. ನಂ.1/1997-98 ರಂತೆ ಪಡೆದು ಅಮಲ್ಜಾರಿ ಕಡತವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಗಳಡಿಯಲ್ಲಿ ಮುಂದಿನ ಕ್ರಮಕ್ಕಾಗಿ ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಿಕೊಡಲಾಗಿತ್ತು. ಸದರಿ ಮಾರಾಟಾಧಿಕಾರಿಗಳು ಅಮಲ್ಜಾರಿ ಪ್ರಕರಣದ ವಿಲೇವಾರಿ ಮತ್ತು ಸುಸ್ತಿಸಾಲ ವಸೂಲಾತಿಗಾಗಿ ಸುಸ್ತಿದಾರರಿಗೆ ಸೇರಿದ ಕೆಳಕಂಡ ಆದೇಶದಡಿಯಲ್ಲಿ ತಿಳಿಸಿರುವ ಷೆಡ್ಯೂಲ್ ಸ್ಥಿರಾಸ್ತಿಯನ್ನು ಅಂತಿಮವಾಗಿ ದಿನಾಂಕ: 24.02.2004 ರಂದು ಬಹಿರಂಗ ಹರಾಜಿಗೆ ಒಳಪಡಿಸಿದ್ದು ಅಂದು ನಡೆದ ಹರಾಜಿನಲ್ಲಿ ಭಾಗವಹಿಸಿದವರ ಪೈಕಿ ಶ್ರೀ ತಾಜ್ ಮಹಮದ್ ಬಿನ್ ಹಯಾತ್ ಬಾಷಾ, ಎನ್. ಎಂ. ಅಗಸನಕಲ್ಲು, ಚಿತ್ರದುರ್ಗ, ಇವರು ಅತಿ ಹೆಚ್ಚಿನ ಮೊತ್ತ ರೂ.1,05,000/-ಕ್ಕೆ (ಒಂದು ಲಕ್ಷದ ಐದು ಸಾವಿರ ರೂಪಾಯಿಗಳು ಮಾತ್ರ) ಬಿಡ್ ಮಾಡಿರುತ್ತಾರೆ. ಮಾರಾಟಾಧಿಕಾರಿಗಳು, ಚಿತ್ರದುರ್ಗ ಶಾಖೆ ಬಿಡ್‌ನ್ನು ಶ್ರೀ ತಾಜ್ ಮಹಮದ್ ಬಿನ್ ಹಯಾತ್ ಬಾಷಾ ರವರ ಹೆಸರಿಗೆ ನಿಲ್ಲಿಸಿ ಮುಂದಿನ ಕ್ರಮಕ್ಕಾಗಿ ಹರಾಜಿನ ದಾಖಲೆಗಳನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಸದರಿ ದಾಖಲೆಗಳನ್ನು ಪರಿಶೀಲಿಸಿದಾಗ, ಮಾರಾಟದ ನಡವಳಿಕೆಗಳು ಕರ್ನಾಟಕ ಸಹಕಾರ ಸಂಘಗಳ ನಿಯಮ 1960 ರನ್ವಯ ನಿಯಮ 38(2)(ಡಿ)ರ ಪ್ರಕಾರ ಕ್ರಮ ಜರುಗಿಸಿರುವುದು ಕಂಡುಬಂದಿರುತ್ತೆ. ಆದ ಕಾರಣ ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಸಹಕಾರ ಸಂಘಗಳ ನಿಯಮ 1960 ನಿಯಮ 38(6)(ಎ) ಅನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ ನಿಯಮ 441, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-4, ಆದ ನಾನು ಶ್ರೀಮತಿ ಷಂಷದ್ ಬೇಗಂ ಮತ್ತು ಅನ್ವರ್ ಬಾಷಾ ಇವರುಗಳಿಗೆ ಸೇರಿದ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ದಿನಾಂಕ: 24.2.2004ರ ಬಹಿರಂಗ ಹರಾಜಿನಲ್ಲಿ ಅತಿಹೆಚ್ಚಿನ ಬಿಡ್ ಮೊತ್ತ ರೂ.1,05,000/-ಕ್ಕೆ (ಒಂದು ಲಕ್ಷದ ಐದು ಸಾವಿರ ರೂಪಾಯಿಗಳು ಮಾತ್ರ)ಕ್ಕೆ ಬಿಡ್ ಮಾಡಿದ್ದ ಶ್ರೀ ತಾಜ್ ಮಹಮದ್ ಬಿನ್ ಹಯಾತ್ ಬಾಷಾ, ಎನ್. ಎಂ. ಅಗಸನಕಲ್ಲು, ಚಿತ್ರದುರ್ಗ ಜಿಲ್ಲೆ, ಇವರ ಹೆಸರಿಗೆ ಈ ಕೂಡಲೇ ಜಾರಿಗೆ ಬರುವಂತೆ ಎಲ್ಲಾ ಹಕ್ಕು ಸ್ವಾಮ್ಯ ಪತ್ರಗಳನ್ನು ವರ್ಗಾವಣೆ ಮಾಡಿ ಮಾರಾಟ ಸ್ಥಿರೀಕರಣದ ಆದೇಶವನ್ನು ನೀಡಿರುತ್ತೇನೆ.

**ಷೆಡ್ಯೂಲ್ ಸ್ಥಿರಾಸ್ತಿಯ ವಿವರ**

**ಚಿತ್ರದುರ್ಗ, ಅಗಸನಕಲ್ಲು ಗ್ರಾಮದ ಸರ್ವೆ ನಂ. 16/2ರ ಖಾತೆ ಸಂಖ್ಯೆ: 80/ಎ ಇದರ ಅಳತೆ**

50 X 86 ಅಡಿಗಳು

**ಚೆಕ್ಕುಬಂದಿ:**

| | |
|---|---|
| ಪೂರ್ವಕ್ಕೆ : | ಖಾಲಿ ಜಾಗ |
| ಪಶ್ಚಿಮಕ್ಕೆ : | ಖಾಲಿ ಜಾಗ |
| ಉತ್ತರಕ್ಕೆ : | ಕಾಂಪೌಂಡ್ |
| ದಕ್ಷಿಣಕ್ಕೆ : | ರಸ್ತೆ |

ಮೇಲ್ಕಂಡ ಸ್ಥಿರಾಸ್ಥಿಯ ವರ್ಗಾವಣೆಯನ್ನು ಸುಸ್ತಿದಾರರು ಪಾವತಿಸಬೇಕಾಗಿರುವ ಭಾಗಶಃ ಸಾಲ ವಸೂಲಿಗಾಗಿ ವರ್ಗಾವಣೆ ಮಾಡಲಾಗಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಮೊಹರಿನೊಂದಿಗೆ ದಿನಾಂಕ: 15.12.2004 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹಾಗೂ ವಸೂಲಾಧಿಕಾರಿ,
ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್,
ನಿಯಮಿತ, ಬೆಂಗಳೂರು.

ಪಿ.ಆರ್.52

### ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ ಇವರ ನಡುವಳಿಕೆಗಳು

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:32:2004**

**ಉಪಸ್ಥಿತರು :** ಶ್ರೀ ಬಿ. ಪಿ. ಜಮಾದಾರ ಸಹಾಯಕ ಪ್ರಾ.ಸಾ.ಅ. ಬೈಲಹೊಂಗಲ

**ವಿಷಯ :** ವಾಹನ ಸಂಖ್ಯೆ: ಕೆಎ-16:2472 ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :**
1. ವಾಹನ ಮಾಲೀಕರ ಅರ್ಜಿ ದಿನಾಂಕ: 23.04.2004.
2. ವಾಹನ ನಿರೀಕ್ಷಕರ ವರದಿ ದಿನಾಂಕ: 20.05.04.

**ಪ್ರಸ್ತಾವನೆ:**

ವಾಹನ ಸಂಖ್ಯೆ: ಕೆಎ-16:2472 ಮಾಲೀಕರು ವಾಹನದ ತೆರಿಗೆಯನ್ನು 30.04.04ರ ವರೆಗೆ ಪಾವತಿಸಿ, ವಾಹನವು ತುಕ್ಕುಹಿಡಿದು ಹಾಳಾಗಿದೆ ಹಾಗೂ ರಿಪೇರಿಯಾಗದ ಸ್ಥಿತಿಯಲ್ಲಿದೆ ಎಂಬ ಕಾರಣ ನೀಡಿ ನೋಂದಣಿ ರದ್ದುಪಡಿಸಲು ವಿನಂತಿಸಿಕೊಂಡಿದ್ದಾರೆ. ಅದಕ್ಕೆ ಪೂರಕವಾಗಿ ಪ್ರಾ.ಸಾ.ಕ. ಬೆಳಗಾವಿ ವಾಹನ ನಿರೀಕ್ಷಕರು ತಮ್ಮ ವರದಿ ದಿನಾಂಕ: 20.05.04ರಲ್ಲಿ ನೋಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿದ್ದಾರೆ.

ಈ ಮೇಲಿನ ಅಂಶಗಳನ್ನು ಪರಿಗಣಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಸಪ್ರಾಸಾಅ:ಬೈ:ನೋಂ:ಕೆಎ-16:2472:04-05 ದಿನಾಂಕ: 22ನೇ ಮೇ 2004**

ಮೇಲ್ಕಂಡ ವಿಷಯವನ್ನು ಪರಿಗಣಿಸಿ, ಮೋಟಾರು ವಾಹನ ಕಾಯ್ದೆ 1988ರ ಕಲಂ 55ರ ಅಡಿಯಲ್ಲಿ ದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಅಧಿಕಾರಿ ಹಾಗೂ ಸಹಾಯಕ ಪ್ರಾ.ಸಾ.ಅ. ಬೈಲಹೊಂಗಲ ಆದ ನಾನು ವಾಹನ ಸಂಖ್ಯೆ:ಕೆಎ-16:2472ಯ ವಾಹನ ನೋಂದಣಿಯನ್ನು ದಿನಾಂಕ: 22.05.04 ರಿಂದ ಅನ್ವಯವಾಗುವಂತೆ ಸದರಿ ವಾಹನದ ನೋಂದಣಿಯನ್ನು ವಾಹನ ಮೇಲೆ ಸರಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಇದ್ದರೆ ಮಾಲೀಕರೇ ಪಾವತಿಮಾಡಬೇಕೆಂಬ ನಿಬಂಧನೆಯೊಂದಿಗೆ ರದ್ದುಪಡಿಸಲಾಗಿದೆ.

**ವಾಹನದ ವಿವರಗಳು**

| | | |
|---|---|---|
| 1) ವಾಹನದ ನೋಂದಣಿ ಸಂಖ್ಯೆ | : | ಕೆಎ-16:2472 |
| 2) ವಾಹನದ ವರ್ಗ | : | ಓಮಿನಿ ಬಸ್ |
| 3) ತಯಾರಕರ ಹೆಸರು | : | ಬಜಾಜ್ ಟೆಂಪೋ |
| 4) ಅಡಿಗಟ್ಟು ಸಂಖ್ಯೆ | : | 616 ಎಫ್‌ಡಿ 72 7008 |
| 5) ಯಂತ್ರದ ಸಂಖ್ಯೆ | : | 616 969 076595 |
| 6) ಮಾಲೀಕರ ಹೆಸರು: ವಿಳಾಸ | : | ಶಂಕರ ಫಕೀರಪ್ಪಾ ನಾಗನೂರ ಸಾ: ತಲ್ಲೂರ, ತಾ: ಸವದತ್ತಿ |

ಪಿ.ಆರ್.53 ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ.

**ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಇವರ ನಡವಳಿಕೆಗಳು**

**ವಿಷಯ :** ಋಣ ಸಮಾಪನೆಗೊಂಡಿರುವ ಬೋಯಿಸೊಣ್ಣೇನಹಳ್ಳಿ ವೃಕ್ಷ ಬೆಳೆಗಾರರ ಸಹಕಾರ ಸಂಘ (ನಿ) ಬಂಗಾರಪೇಟೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಆದೇಶದ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:1232:97-98 ದಿನಾಂಕ: 29.9.1998.
2. ಈ ಕಛೇರಿಯ ಆದೇಶದ ಸಂಖ್ಯೆ: ಡಿಆರ್‌ಕೆ:ಎಲ್‌ಕ್ಯೂಡಿ:93:2002-03 ದಿನಾಂಕ: 21.6.2003.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಪತ್ರ ಸಂಖ್ಯೆ: ಎಆರ್‌ಕೆ:ಎಲ್‌ಕ್ಯೂಡಿ:22:98-99 ದಿನಾಂಕ:24.11.2004.

**ಪೀಠಿಕೆ:**

ಬಂಗಾರಪೇಟೆ ತಾಲ್ಲೂಕು ಬೋಯಿಸೊಣ್ಣೇನಹಳ್ಳಿ ವೃಕ್ಷ ಬೆಳೆಗಾರರ ಸಹಕಾರ ಸಂಘ (ನಿ) ಈ ಸಂಘವು ಸುಮಾರು ವರ್ಷಗಳಿಂದ ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ರಲ್ಲಿನ ಆದೇಶದಲ್ಲಿ ಸಂಘವನ್ನು ಋಣ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ಬಂಗಾರಪೇಟೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ನಂತರ ಅವರ ಬದಲಿಗೆ ಶ್ರೀ ವಿ. ನಾಗರಾಜು, ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು, ನಿಯಮ 441, ಕೋಲಾರ ಜಿಲ್ಲಾ ಸಹಕಾರಿ ಹಾಲು ಉತ್ಪಾದಕರ ಸಂಘಗಳ ಒಕ್ಕೂಟ (ನಿ) ಕೋಲಾರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. (ಉಲ್ಲೇಖ-2).

ಈಗ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ವರದಿ ಸಲ್ಲಿಸಿ (ಉಲ್ಲೇಖ 3) ಸಂಘವು ಸುಮಾರು 6 ವರ್ಷಗಳಿಂದ ಯಾವುದೇ ಕೆಲಸ ನಿರ್ವಹಿಸದೆ ಸ್ಥಗಿತಗೊಂಡಿದ್ದು, ಸಂಘದ ಸದಸ್ಯರಿಗೆ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಆಸಕ್ತಿ ಇಲ್ಲದೇ ಇರುವುದರಿಂದ ಸಂಘದ ಪುನಶ್ಚೇತನಕ್ಕೆ ಯಾವುದೇ ರಹಾ ಇಲ್ಲದ ಕಾರಣ ಈ ಸಂಘದ ನೋಂದಣಿಯನ್ನು ರದ್ದುಪಡಿಸಬೇಕೆಂದು ಕೋರಿರುತ್ತಾರೆ. ಹಾಗೂ ದಿನಾಂಕ: 27.10.2004 ರಂದು ನಡೆದ ಸಮಾಪನಾಧಿಕಾರಿಗಳ ಸಭೆಯಲ್ಲಿ ಸಮಾಪನಾಧಿಕಾರಿಗಳು ಕೈಗೊಂಡ ತೀರ್ಮಾನದ ನಡವಳಿಕೆಗಳನ್ನು ಮತ್ತು ಸಂಘದ ಶೂನ್ಯ ಆಸ್ತಿ-ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ.

ಈ ರೀತಿ ಸಮಾಪನಾ ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದರಿಂದ ಹಾಗೂ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಯಾವುದೇ ಪ್ರಯೋಜನ ಇಲ್ಲದೇ ಇರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂ:ಡಿಆರ್‌ಕೆ:ಎಲ್‌ಕ್ಯೂಡಿ:1232:97-98 ದಿನಾಂಕ: 25ನೇ ನವೆಂಬರ್ 2004**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಬಂಗಾರಪೇಟೆ ತಾಲ್ಲೂಕು ಬೋಯಿಸೊಣ್ಣೇನಹಳ್ಳಿ ವೃಕ್ಷ ಬೆಳೆಗಾರರ ಸಹಕಾರ ಸಂಘ (ನಿ) ಈ ಸಂಘದ ನೋಂದಣಿ ಸಂಖ್ಯೆ: ಎಆರ್‌ಕೆ:49:ಇಎಸ್‌ಟಿ:157:23886:96-97 ದಿನಾಂಕ: 15.1.1987ನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರಂತೆ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:89:ಎಲ್‌ಎಂ:2001 ದಿನಾಂಕ: 21.11.2001 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಶ್ರೀ ಬಿ. ಸಿ. ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ರದ್ದುಪಡಿಸಿ ಆದೇಶಿಸಿರುತ್ತೇನೆ. ಹಾಗೂ ಸಮಾಪನಾಧಿಕಾರಿಗಳು ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು 30 ದಿವಸದೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ಆದೇಶವನ್ನು ಮಾಡಲಾಗಿರುತ್ತದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 25.11.2004 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

**ಬಿ. ಸಿ. ಸತೀಶ್**

ಪಿ.ಆರ್.54 ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ
## ನೇಮಕಾತಿ ಆದೇಶ
## ಜಿಲ್ಲಾ ನೋಂದಣಾಧಿಕಾರಿಗಳು, ಚಿತ್ರದುರ್ಗ ಇವರ ನಡವಳಿಗಳು

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಚಿತ್ರದುರ್ಗ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: ಸಿಬ್ಬಂದಿ:66:2001-02 ದಿನಾಂಕ: 26.12.2001.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: EST-1-273/2001-02 ದಿನಾಂಕ: 1.8.2002 (ದಿನಾಂಕ: 8.8.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ).
4. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ: EST-1-273/2001-02 ದಿನಾಂಕ: 23.11.2004.
5. ನೋಂದಣಿ ಮಹಾಪರಿವೀಕ್ಷಕರ ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST-1-273/2001-02 ದಿನಾಂಕ:14.12.2004.

**ಪ್ರಸ್ತಾವನೆ:**

ಈ ಇಲಾಖೆಯ ಚಿತ್ರದುರ್ಗ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1. | ಚಿತ್ರದುರ್ಗ ಜಿಲ್ಲೆ | ಒಂದು | ಇಲ್ಲ | ಒಂದು |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಅಭ್ಯರ್ಥಿಗಳನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (5)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಸದರಿ ಅಭ್ಯರ್ಥಿಗಳನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಅಭ್ಯರ್ಥಿಗಳನ್ನು ಸದರಿ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

### ಆದೇಶ
### ಸಂಖ್ಯೆ: ಸಿಬ್ಬಂದಿ:66:2001-02, ದಿನಾಂಕ: 27ನೇ ಡಿಸೆಂಬರ್ 2004

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (5)ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಅಭ್ಯರ್ಥಿಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ. 3000-75-3450-100-4450-125-5450ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ST | ಜನ್ಮ ದಿನಾಂಕ | 7.9.2002 ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೇ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 1. | ಪರಸಪ್ಪ S/o ಅಂಬಪ್ಪ ಚಿನ್ನ, ಮು:ಪೋ: ಹೊಳಕುಂದಾ 585313. Via-ಕಮಲಾಪುರ, ತಾ:ಜಿ: ಗುಲ್ಬರ್ಗಾ | SC | 1.06.1968 | 34.03.06 | S.S.L.C 73.000 | ಉಪನೋಂದಣಿ ಕಛೇರಿ ಚಳ್ಳಕೆರೆ ಚಿತ್ರದುರ್ಗ ಜಿಲ್ಲೆ | ಪರಿಶಿಷ್ಟ ಜಾತಿ ಗ್ರಾಮೀಣ ಅಭ್ಯರ್ಥಿ ಮುಖ್ಯಪಟ್ಟಿ |

S.S.L.C ಅಂಕಪಟ್ಟಿಯ ನೋಂದಣಿ ಸಂಖ್ಯೆ: 312656/ ಏಪ್ರೀಲ್ 1984ದ ಪ್ರಕಾರ ಸದರಿ ಅಭ್ಯರ್ಥಿಯ ಜನ್ಮ ದಿನಾಂಕವು 01.06.1968 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟಿಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರುಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು. ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/99 (ಶ್ರೀ ಬಿ. ಎಲ್. ನಾರಾಯಣ Vs -ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧಳಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು

ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ದನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.

17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್.56

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ನೇಮಕಾತಿ ಆದೇಶ

## ಜಿಲ್ಲಾ ನೋಂದಣಾಧಿಕಾರಿಗಳು, ತುಮಕೂರು ಇವರ ನಡವಳಿಗಳು

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ತುಮಕೂರು ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: ಇಎಸ್‌ಟಿ:38:97-98 ದಿನಾಂಕ: 24.12.2001.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: EST-1-273/2001-02 ದಿನಾಂಕ: 1.8.2002 (ದಿನಾಂಕ: 8.8.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ).
4. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ: EST-1-273/2001-02 ದಿನಾಂಕ: 23.11.2004.
5. ನೋಂದಣಿ ಮಹಾಪರಿವೀಕ್ಷಕರ ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST-1-273/2001-02 ದಿನಾಂಕ:14.12.2004.

**ಪ್ರಸ್ತಾವನೆ:**

ಈ ಇಲಾಖೆಯ ತುಮಕೂರು ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1. | ತುಮಕೂರು ಜಿಲ್ಲೆ | ಒಂದು | ಇಲ್ಲ | ಒಂದು |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಆಧಾರದ

ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಅಭ್ಯರ್ಥಿಗಳನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (5)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಸದರಿ ಅಭ್ಯರ್ಥಿಗಳನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಅಭ್ಯರ್ಥಿಗಳನ್ನು ಸದರಿ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಇ.ಎಸ್.ಟಿ:14:04-05, ದಿನಾಂಕ: 27ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (5)ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಅಭ್ಯರ್ಥಿಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ. 3000-75-3450-100-4450-125-5450ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ST | ಜನ್ಮ ದಿನಾಂಕ | 7.9.2002 ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ-ತಿಂ-ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೇ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 17 | ಮಂಜಪ್ಪ ಬಿ. S/o ಭೀಮಪ್ಪ N., C/o ಸಾರ್ವಜನಿಕ ದೂರವಾಣಿ ಕೇಂದ್ರ, ತಾಲ್ಲೂಕು ಕಛೇರಿ ಆವರಣ, ಹರಿಹರ, ದಾವಣಗೆರೆ ಜಿಲ್ಲೆ-577601 | SC | 5.06.1966 | 36.03.02 | S.S.L.C 71.333 | ಉಪನೋಂದಣಿ ಕಛೇರಿ ಕುಣಿಗಲ್, ತುಮಕೂರು ಜಿಲ್ಲೆ | ಪರಿಶಿಷ್ಟ ಜಾತಿ ಅಂಗವಿಕಲ ಅಭ್ಯರ್ಥಿ ಮುಖ್ಯಪಟ್ಟಿ |

S.S.L.C ಅಂಕಪಟ್ಟಿಯ ನೋಂದಣಿ ಸಂಖ್ಯೆ: 224532/ ಏಪ್ರೀಲ್ 1984ದ ಪ್ರಕಾರ ಸದರಿ ಅಭ್ಯರ್ಥಿಯ ಜನ್ಮ ದಿನಾಂಕವು 05.06.1966 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟಿಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.

7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್‌ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರುಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು. ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/99 (ಶ್ರೀ ಬಿ. ಎಲ್. ನಾರಾಯಣ Vs -ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ದಳಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ದನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್.57

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ಜಿಲ್ಲಾ ನೋಂದಣಾಧಿಕಾರಿಗಳು, ಹಾವೇರಿ ಇವರ ನಡವಳಿಗಳು

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಹಾವೇರಿ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ದ್ವಿತೀಯ ದರ್ಜೆ ಸಹಾಯಕರನ್ನು ನೇಮಕ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ :**
1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ಈ ಕಛೇರಿಯಿಂದ ಬರೆದಿರುವ ಪತ್ರ ಸಂಖ್ಯೆ: ಜಿನೋಹಾ:ಸಿಬ್ಬಂದಿ:78:2001-02 ದಿನಾಂಕ: 25.1.2002.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಕೆಸಿಎಸ್ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
3. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: EST-1-273/2001-02 ದಿನಾಂಕ: 1.8.2002 (ದಿನಾಂಕ: 8.8.2002ರ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ).
4. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಂತಿಮ ಆಯ್ಕೆ ಪಟ್ಟಿ ಸಂಖ್ಯೆ: EST-1-273/2001-02 ದಿನಾಂಕ: 23.11.2004.
5. ನೋಂದಣಿ ಮಹಾಪರಿವೀಕ್ಷಕರ ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST-1-273/2001-02 ದಿನಾಂಕ:14.12.2004.

**ಪ್ರಸ್ತಾವನೆ:**

ಈ ಇಲಾಖೆಯ ಹಾವೇರಿ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ ಕೆಳಕಂಡಂತೆ ಬ್ಯಾಕ್‌ಲಾಗ್ ಹುದ್ದೆಗಳು ಇರುತ್ತವೆಂದು ಈ ಕಛೇರಿಯಿಂದ ಉಲ್ಲೇಖ (1) ರನ್ವಯ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ ವರದಿ ಮಾಡಲಾಗಿತ್ತು.

| ಕ್ರ.ಸಂ. | ಜಿಲ್ಲೆ | ಸದರಿ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
| 1. | ಹಾವೇರಿ ಜಿಲ್ಲೆ | ಒಂದು | ಒಂದು | ಎರಡು |

ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಉಲ್ಲೇಖ (3)ರ ಅಧಿಸೂಚನೆ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳು ಪರಿಶೀಲನೆಗೊಂಡ ನಂತರ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷವಯೋಮಿತಿಯಲ್ಲಿರುವ ಅರ್ಹ ಅಭ್ಯರ್ಥಿಗಳನ್ನು Merit ಆಧಾರದ ಮೇಲೆ ಆಯ್ಕೆ ಮಾಡಿ ಅರ್ಹ ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಉಲ್ಲೇಖ (4) ರನ್ವಯ ದಿನಾಂಕ: 23.11.2004 ರಂದು ಪ್ರಕಟಿಸಿ, ತದನಂತರ ಈ ಕಛೇರಿಯಿಂದ ಉಲ್ಲೇಖ (1)ರ ಪತ್ರದಲ್ಲಿ ಮೇಲ್ಕಂಡಂತೆ ವರದಿ ಮಾಡಿದ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅನುಗುಣವಾಗಿ ಕೆಳಕಂಡ ಅಭ್ಯರ್ಥಿಗಳನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಉಲ್ಲೇಖ (5)ರ ಅವರ ಅಲಾಟ್‌ಮೆಂಟ್ ಆದೇಶದಲ್ಲಿ ಈ ಜಿಲ್ಲೆಗೆ ಅಲಾಟ್ ಮಾಡಿ ಸದರಿ ಅಭ್ಯರ್ಥಿಗಳನ್ನು ಈ ಜಿಲ್ಲೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿಕೊಳ್ಳುವಂತೆ ನಿರ್ದೇಶಿಸಿದ್ದರ ಮೇರೆ ಕೆಳಕಂಡ ಅಭ್ಯರ್ಥಿಗಳನ್ನು ಸದರಿ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ನೇಮಕ ಮಾಡಿಕೊಳ್ಳುವ ಸಲುವಾಗಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

### ಆದೇಶ

### ಸಂಖ್ಯೆ: ಜಿನೋಹಾ:ಸಿಬ್ಬಂದಿ:63:2004-05, ದಿನಾಂಕ: 3ನೇ ಜನವರಿ 2005

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (2)ರ ಬ್ಯಾಕ್‌ಲಾಗ್ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಉಲ್ಲೇಖ (5)ರಲ್ಲಿನ ಅಲಾಟ್‌ಮೆಂಟ್ ಆದೇಶದಲ್ಲಿ ಕಂಡು ಬಂದ ಕೆಳಕಂಡ ಅಭ್ಯರ್ಥಿಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ರೂ. 3000-75-3450-100-4450-125-5450ರ ವೇತನ ಶ್ರೇಣಿಯಲ್ಲಿ ಇತರೆ ಭತ್ಯೆಗಳು ಸೇರಿದಂತೆ ತಾತ್ಕಾಲಿಕವಾಗಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಲಾಗಿದೆ. ಹಾಗೂ ಸದರಿ ಅಭ್ಯರ್ಥಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕರೆಂದು ಸ್ಥಳ ನಿಯುಕ್ತಿಗೊಳಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ST | ಜನ್ಮ ದಿನಾಂಕ | 7.9.2002 ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿ ಅಡಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಲಾಗಿದೆಯೇ ಅದರ ವಿವರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 1. | ಅನಿಲ್ S/o ಮಧುಕರ ಗೋಠೆ ಮಧುಕರ ಭೀಮಾನಗರ ಚಿಕ್ಕೋಡಿ ತಾ: ಚಿಕ್ಕೋಡಿ ಜಿ: ಬೆಳಗಾವಿ | SC | 11.07.1973 | 29.01.26 | S.S.L.C | ಉಪ ನೋಂದಣಿ ಕಛೇರಿ ಹಿರೇಕೆರೂರು ಹಾವೇರಿ ಜಿಲ್ಲೆ | ಪರಿಶಿಷ್ಟ ಜಾತಿ ಗ್ರಾಮೀಣ ಅಭ್ಯರ್ಥಿ ಮುಖ್ಯಪಟ್ಟಿ |
| 2. | ರೇಖಾ ಬಿ. ಮುದ್ದಿ W/o ಜಯಧರ ಎಮ್ ದೊಡ್ಡಮನಿ C/o ಎಮ್ ಎನ್ ದೊಡ್ಡಮನಿ Spl: D.C. ಎಚ್ ನಂ.5 ಮಾಲತೇಶ ನಿವಾಸ ಕೆಂಪಗೆರೆ ಲೈನ್ ಬಜಾರ್ ಧಾರವಾಡ | ST | 9.5.1971 | 31.3.28 | S.S.L.C | ಜಿಲ್ಲಾ ನೋಂದಣಿ ಕಚೇರಿ ಹಾವೇರಿ ಜಿಲ್ಲೆ ಹಾವೇರಿ | ಪರಿಶಿಷ್ಟ ಪಂಗಡ ಸಾಮಾನ್ಯ ಅಭ್ಯರ್ಥಿ ಮುಖ್ಯಪಟ್ಟಿ |

S.S.L.C ಅಂಕಪಟ್ಟಿಯ ನೋಂದಣಿ ಸಂಖ್ಯೆ: 197574/ ಏಪ್ರಿಲ್ 1989ದ ಪ್ರಕಾರ ಅನಿಲ ಮಧುಕರ್ ಗೋಠೆ ಇವರ ಜನ್ಮ ದಿನಾಂಕವು: 11.07.1973 ಮತ್ತು ಎಸ್‌ಎಸ್‌ಎಲ್‌ಸಿ ಅಂಕಪಟ್ಟಿ ನೋಂದಣಿ ಸಂಖ್ಯೆ: 223462/ ಮಾರ್ಚ್ 1986ದ ಪ್ರಕಾರ ರೇಖಾ ಬಿ ಮುದ್ದಿ ಇವರ ಜನ್ಮ ದಿನಾಂಕವು 09.05.1971 ಆಗಿರುತ್ತದೆ.

ಈ ನೇಮಕಾತಿ ಆದೇಶವು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ. ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

**ಷರತ್ತುಗಳು:**

1. ಈ ನೇಮಕಾತಿಯು ತಾತ್ಕಾಲಿಕವಾಗಿದ್ದು ಸದರಿ ಅಭ್ಯರ್ಥಿಯನ್ನು ಯಾವುದೇ ನೋಟೀಸ್ ಅಥವಾ ಕಾರಣ ನೀಡದೇ ಯಾವುದೇ ಘಳಿಗೆಯಲ್ಲಾದರೂ ಕೆಲಸದಿಂದ ತೆಗೆದು ಹಾಕುವ ಷರತ್ತಿಗೆ ಒಳಪಟ್ಟು ನೇಮಕಾತಿ ಮಾಡಲಾಗಿದೆ.
2. ಸದರಿ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರಲ್ಲಿನ ನಿಬಂಧನೆಗಳಿಗೆ ಒಳಪಡಿಸಿ ಮತ್ತು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷದ ಅರ್ಹತಾ ಪರೀಕ್ಷಾ ಅವಧಿಗೆ ಒಳಪಡಿಸಿ ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.
3. ಈ ನೇಮಕಾತಿಯು ಆಗಿಂದಾಗ್ಗೆ ಜಾರಿಯಲ್ಲಿರುವ ಸೇವಾ ಷರತ್ತುಗಳು, ನಿಯಮ ಮತ್ತು ಆದೇಶಗಳಿಗೆ ಒಳಪಡುತ್ತದೆ. ಹಾಗೂ ಸದರಿ ಅಭ್ಯರ್ಥಿಗಳು ಕೆ.ಸಿ.ಎಸ್.ಆರ್. ಮತ್ತು ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ಮತ್ತು ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957 ರಲ್ಲಿನ ಹಾಗೂ ಆಗಿಂದಾಗ್ಗೆ ಜಾರಿಗೆ ಬರುವ ಹಾಗೂ ಜಾರಿಯಲ್ಲಿರುವ ಇತರೆ ಸೇವಾ ಷರತ್ತುಗಳಿಗೆ ಮತ್ತು ನಿಬಂಧನೆಗಳಿಗೆ ಒಳಪಡುತ್ತಾರೆ.
4. ಈ ಆದೇಶ ಮುಟ್ಟಿದ 15 (ಹದಿನೈದು) ದಿನಗಳ ಅವಧಿಯೊಳಗೆ ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಕೆಲಸಕ್ಕೆ ಹಾಜರಾಗದಿದ್ದಲ್ಲಿ ಈ ನೇಮಕಾತಿ ರದ್ದಾಗುವುದು ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನೂ ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
5. ಅರ್ಹತಾ ಪರೀಕ್ಷಾ ಅವಧಿಯು ಎರಡು ವರ್ಷಗಳೆಂದು ನಿಗದಿಪಡಿಸಿದೆ. ಈ ಅವಧಿಯೊಳಗೆ 1974ರ ಕರ್ನಾಟಕ ನಾಗರೀಕ ಸೇವಾ (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಈ ಇಲಾಖೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಅಭ್ಯರ್ಥಿಯು ಕಡ್ಡಾಯವಾಗಿ ತೇರ್ಗಡೆ ಹೊಂದತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.
6. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
7. ವಿದ್ಯಾರ್ಹತೆಯ ಬಗ್ಗೆ ಇರುವ ಮೂಲ ಪ್ರಮಾಣ ಪತ್ರಗಳನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
8. ಜನ್ಮ ದಿನಾಂಕದ ಬಗ್ಗೆ ಮೂಲ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
9. ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ನಿಷ್ಠೆ ಪ್ರಮಾಣ ಪತ್ರವನ್ನು (ಪ್ರತಿಜ್ಞಾ ವಿಧಿ) ಬರೆದುಕೊಡತಕ್ಕದ್ದು.
10. ಕೆಲಸಕ್ಕೆ ಹಾಜರಾಗುವ ಮುನ್ನ ಅಭ್ಯರ್ಥಿಯು ಸಂಬಂಧಪಟ್ಟ ಜಿಲ್ಲಾ ಸರ್ಜನ್ನಿಂದ ದೈಹಿಕ ಪ್ರಮಾಣ ಪತ್ರವನ್ನು ನಿಗದಿತ ನಮೂನೆಯಲ್ಲಿ ಪಡೆದು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
11. ಅಭ್ಯರ್ಥಿಯು ಕಡೆಯದಾಗಿ ಹಾಜರಾಗಿದ್ದ ಶಾಲೆಯ ಮುಖ್ಯೋಪಾಧ್ಯಾಯರು ನೀಡಿರುವ ನಡತೆ ಪ್ರಮಾಣ ಪತ್ರವನ್ನು ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಹಾಜರುಪಡಿಸತಕ್ಕದ್ದು.
12. ಅಭ್ಯರ್ಥಿಯು ಮದುವೆಯಾಗಿದ್ದಲ್ಲಿ ಒಬ್ಬರೇ ಪತಿ ಅಥವಾ ಪತ್ನಿ ಹೊಂದಿರುವ ಬಗ್ಗೆ ಕೆ.ಸಿ.ಎಸ್. (ನಡತೆ) ನಿಯಮಗಳು 1966 ರಲ್ಲಿನ ನಿಯಮ 28ರ ರೀತ್ಯ ಹಾಜರಾಗುವ ಕಛೇರಿಯಲ್ಲಿ ಆ ಕಛೇರಿಯ ಮುಖ್ಯಸ್ಥರ ಮುಂದೆ ಘೋಷಣೆ ಹಾಜರುಪಡಿಸತಕ್ಕದ್ದು.
13. ಅಭ್ಯರ್ಥಿಯು ತಮ್ಮ ಜಾತಿ, ಜನ್ಮ ದಿನಾಂಕ, ವಿದ್ಯಾರ್ಹತೆ ಇತ್ಯಾದಿಯಾಗಿ ಯಾವುದೇ ವಿಚಾರದಲ್ಲಿ ಅಭ್ಯರ್ಥಿಯು ನೀಡಿರುವ ವಿವರಗಳು ಸುಳ್ಳೆಂದಾಗಲೀ ಅಥವಾ ತಪ್ಪೆಂದಾಗಲೀ ತಿಳಿದು ಬಂದಲ್ಲಿ ಅಂತಹ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು. ಹಾಗೂ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳು 1957ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.

14. ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಎಲ್ಲಾ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232/99 (ಶ್ರೀ ಬಿ. ಎಲ್. ನಾರಾಯಣ Vs -ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು ಹಾಗೂ ಸದರಿ ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:99 ರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧಳಾಗಿರುತ್ತೇನೆ ಎಂಬ ಬಗ್ಗೆ 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-3 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
15. ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
16. ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಮತ್ತು ನೇಮಕಾತಿಯನ್ನು ಶಾಶ್ವತವಾಗಿ ರದ್ದುಪಡಿಸಲಾಗುವುದು ಹಾಗೂ ಅಭ್ಯರ್ಥಿಯ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು. ಇದಕ್ಕೆ ಬದ್ಧನಾಗಿರುತ್ತೇನೆ ಎಂಬ ಬಗ್ಗೆ ಅಭ್ಯರ್ಥಿಯು 20/- ರೂ.ಗಳ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-1 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
17. ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
18. ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಹಾಗೂ ಮಾಜಿ ಸೈನಿಕರ ಮೀಸಲಾತಿಯಲ್ಲಿ ಆಯ್ಕೆಗೊಂಡವರು ಮಾಜಿ ಸೈನಿಕರಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
19. ಇದೇ ರೀತಿ ಯೋಜನಾ ನಿರಾಶ್ರಿತರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಯೋಜನಾ ನಿರಾಶ್ರಿತ ಅಭ್ಯರ್ಥಿಗಳಲ್ಲವೆಂದು ಮತ್ತು ಅಂಗವಿಕಲರ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡವರು ಅಂಗವಿಕಲ ಅಭ್ಯರ್ಥಿಗಳಲ್ಲವೆಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
20. ಈ ನೇಮಕಾತಿ ಆದೇಶವು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
21. ನೇಮಕಾತಿ ಮಾಡಿರುವ ಸ್ಥಳದ ಅಥವಾ ಕಛೇರಿಯ ಮಾರ್ಪಾಡಿಗಾಗಿ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕಾಗಲೀ ಪುರಸ್ಕರಿಸಲಾಗುವುದಿಲ್ಲ.
22. ಅಭ್ಯರ್ಥಿಯು KGID ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
23. ಈ ನೇಮಕಾತಿಗಾಗಿ ಅರ್ಜಿಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ನಾವುದೇ ಅಭ್ಯರ್ಥಿಯು ಅವರ ಆಯ್ಕೆಯನ್ನು ದಾಖಲೆ ಸಹಿತ establish ಮಾಡಿದಲ್ಲಿ ಅಥವಾ ನನ್ನ ನೇಮಕಾತಿಯು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತುಪಡಿಸಿದಲ್ಲಿ ನನ್ನ ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೇ ಶಾಶ್ವತವಾಗಿ ರದ್ದುಗೊಳಿಸಿ ನನ್ನ ಬದಲಿಗೆ ಬೇರೊಬ್ಬರನ್ನು ಆಯ್ಕೆ ಮಾಡಬಹುದು ಎಂಬ ಬಗ್ಗೆ ಅಭ್ಯರ್ಥಿಯು 20/- ರೂ ಛಾಪಾ ಕಾಗದದಲ್ಲಿ ಮುಚ್ಚಳಿಕೆ ನಮೂನೆ-2 ಅನ್ನು ಈ ಕಛೇರಿಗೆ ಬರೆದುಕೊಡತಕ್ಕದ್ದು.
24. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು ತಮ್ಮ ವರ್ಗಾವಣೆಗಾಗಿ ರಾಜಕೀಯ ಅಥವಾ ಇನ್ನಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಕಾನೂನು ರೀತ್ಯಾ ಶಿಸ್ತು ಕ್ರಮ ಜರುಗಿಸಲಾಗುವುದು.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,
ಹಾವೇರಿ ಜಿಲ್ಲೆ, ಹಾವೇರಿ.

ಪಿ.ಆರ್.109

## ಕರ್ನಾಟಕ ಲೋಕ ಸೇವಾ ಆಯೋಗದ ನಡವಳಿಗಳು

**ವಿಷಯ :** 2004ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳಲ್ಲಿ ಶ್ರೀಮತಿ ವೆಂಕಮ್ಮ ಉರುಫ್ ಸುಮಾ ಸಿ. ಕಟ್ಟಿಮನಿ ದ್ವಿತೀಯ ದರ್ಜೆ ಸಹಾಯಕರು ಮತ್ತು ಶ್ರೀ ಕುಮಾರ್ ಒ. ಪ್ರಥಮ ದರ್ಜೆ ಸಹಾಯಕರು, ವಾಣಿಜ್ಯ ತೆರಿಗೆ ಅಧಿಕಾರಿಗಳ ಕಛೇರಿ, ಹುಬ್ಬಳ್ಳಿ, ಇವರುಗಳು ಎಸಗಿರುವ ದುರಾಚಾರ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ :**
1. 2004ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗೆ ಶ್ರೀಮತಿ ವೆಂಕಮ್ಮ ಉರುಫ್ ಸುಮಾ. ಸಿ. ಕಟ್ಟಿಮನಿ ಮತ್ತು ಶ್ರೀ ಕುಮಾರ್ ಒ. ಇವರುಗಳ ದಿನಾಂಕ: 14.05.2004ರ ಅರ್ಜಿಗಳು.
2. ಶ್ರೀಮತಿ ವೆಂಕಮ್ಮ ಮತ್ತು ಕುಮಾರ್ ಇವರಿಗೆ ಜಾರಿ ಮಾಡಿದ ಕಾರಣ ಕೇಳುವ ನೋಟೀಸುಗಳ ಸಂಖ್ಯೆ: ಆರ್‌ಹೆಚ್‌ಎಸ್ 190:04-05 ಪಿಎಸ್‌ಸಿ ದಿನಾಂಕ: 01.10.2004.
3. ಶ್ರೀಮತಿ ವೆಂಕಮ್ಮರವರ ದಿನಾಂಕ: 10.10.2004ರ ಹೇಳಿಕೆ.
4. ಶ್ರೀ ಕುಮಾರ್ ರವರ ದಿನಾಂಕ: 11.10.2004ರ ಹೇಳಿಕೆ.

**ಪ್ರಸ್ತಾವನೆ:**

2004ನೇ ಸಾಲಿನ ಪ್ರಥಮ ಅಧಿವೇಶನದ ಕಮರ್ಷಿಯಲ್ ಟ್ಯಾಕ್ಸ್ ಭಾಗ-1ರ ಇಲಾಖಾ ಪರೀಕ್ಷೆಯ ಉತ್ತರ ಪತ್ರಿಕೆಗಳ ಮೌಲ್ಯ ಮಾಪನದ ಕಾರ್ಯವನ್ನು ಕೈಗೊಂಡಾಗ ಶ್ರೀಮತಿ ವೆಂಕಮ್ಮ ಉರುಫ್ ಸುಮಾ ಸಿ. ಕಟ್ಟಿಮನಿ, ದ್ವಿತೀಯ ದರ್ಜೆ ಸಹಾಯಕರು, ವಾಣಿಜ್ಯ ತೆರಿಗೆ ಅಧಿಕಾರಿಗಳ ಕಛೇರಿ, ಹುಬ್ಬಳ್ಳಿ (ನೋಂದಣಿ ಸಂಖ್ಯೆ: 59518) ಇವರ ಉತ್ತರ ಪತ್ರಿಕೆಯ ಪುಟ-12ರಲ್ಲಿ ಪ್ರಶ್ನೆ-6ಕ್ಕೆ ಬೇರೆಯವರಿಂದ ಉತ್ತರ ಬರೆಸಿರುವುದು ಮತ್ತು ಆ ರೀತಿ ಪ್ರಶ್ನೆ-6ಕ್ಕೆ ಉತ್ತರವನ್ನು ಶ್ರೀ ಕುಮಾರ ಒ. ಪ್ರಥಮ ದರ್ಜೆ ಸಹಾಯಕರು, ವಾಣಿಜ್ಯ ತೆರಿಗೆ ಅಧಿಕಾರಿಗಳ ಕಛೇರಿ, ಹುಬ್ಬಳ್ಳಿ (ನೋಂದಣಿ ಸಂಖ್ಯೆ:59400) ಇವರು ತಮ್ಮ ಹಸ್ತಾಕ್ಷರದಿಂದ ಉತ್ತರ ಬರೆಯುವುದು ಆಯೋಗದ ಗಮನಕ್ಕೆ ಬಂದಿತು. ಆ ಇಬ್ಬರು ಅಭ್ಯರ್ಥಿಗಳು ಆ ರೀತಿ ಮಾಡಿರುವುದು ಪರೀಕ್ಷಾ ದುರಾಚಾರವಾಗಿರುವುದರಿಂದ ಅವರುಗಳಿಗೆ ಮೇಲೆ (2)ರಲ್ಲಿ ಓದಲಾದ ಕಾರಣ ಕೇಳುವ ನೋಟಿಸುಗಳನ್ನು ಜಾರಿ ಮಾಡಿ

ಅವರ 2004ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗೆ ಅವರ ಅಭ್ಯರ್ಥಿತನವನ್ನು ರದ್ದುಪಡಿಸುವುದಲ್ಲದೆ ಮುಂದಿನ 4 ಅಧಿವೇಶನಗಳ ಇಲಾಖಾ ಪರೀಕ್ಷಾಗಳನ್ನು ತೆಗೆದುಕೊಳ್ಳದಂತೆ ದಂಡನೆ ಅವರ ಮೇಲೆ ಏಕೆ ವಿಧಿಸಬಾರದು ಎಂಬ ಬಗ್ಗೆ ಲಿಖಿತ ಸಮಜಾಯಿಷಿಗಳನ್ನು ನೀಡುವಂತೆ ಸೂಚಿಸಲಾಯಿತು. ಆ ನೋಟಿಸುಗಳಿಗೆ ಇಬ್ಬರು ಅಭ್ಯರ್ಥಿಗಳು ಆಯೋಗಕ್ಕೆ ನೀಡಿರುವ ಹೇಳಿಕೆಗಳನ್ನು ಈ ಕೆಳಗೆ ಯಥಾವತ್ತಾಗಿ ಪುನರಾವರ್ತಿಸಿದೆ.

**ಶ್ರೀಮತಿ ವೆಂಕಮ್ಮ ಉರುಫ್ ಸುಮ. ಸಿ. ಕಟ್ಟಿಮನಿ ದ್ವಿತೀಯ ದರ್ಜೆ ಸಹಾಯಕರು, ಇವರ ಹೇಳಿಕೆ:**

ಮೇಲಿನ ಉಲ್ಲೇಖಿತ ವಿಷಯಕ್ಕೆ ಸಂಬಂಧಿಸಿದಂತೆ ನಾನು ತಮ್ಮಲ್ಲಿ ಕಳಕಳಿಯಿಂದ ಪ್ರಾರ್ಥಿಸಿಕೊಳ್ಳುತ್ತಾ, ತಮ್ಮ ಉಲ್ಲೇಖಿತ ಪತ್ರದಲ್ಲಿ ನನಗೆ ನೀಡಿದ ನೋಟೀಸಿಗೆ ಸಂಬಂಧಿಸಿದಂತೆ ನಾನು ಅಸಹಾಯಕಳಾಗಿದ್ದು, ಇದಕ್ಕೂ ನನಗೂ ಮತ್ತು ಅದರಲ್ಲಿ ಬದಲಾದ ಕೈಬರಹಕ್ಕೂ ಸಂಬಂಧವಿಲ್ಲವೆಂಬುದನ್ನು ತಿಳಿಸಬಯಸುತ್ತೇನೆ.

ನಾನು ಹೊಸದಾಗಿ ಕೆಲಸಕ್ಕೆ ಸೇರಿದ್ದು, ಅನುಕಂಪದ ಆಧಾರದ ಮೇಲೆ ಕೆಲಸವನ್ನು ಪಡೆದವಳಾಗಿರುತ್ತೇನೆ. ಕುಟುಂಬದ ಜವಾಬ್ದಾರಿಯನ್ನು ಹೊತ್ತ ನನ್ನ ಪತಿಯವರು ಅಕಾಲಿಕ ಮರಣ ಹೊಂದಿದ ಕಾರಣ ಚಿಕ್ಕ ಮಗುವನ್ನು ಹೊಂದಿರುವ ನಾನು ಅನುಕಂಪದ ಆಧಾರದ ಮೇಲೆ ಕೆಲಸವನ್ನು ಘನ ಸರ್ಕಾರದ ಕೃಪೆಯಿಂದ ಹೊಂದಿದವಳಾಗಿರುತ್ತೇನೆ.

ಸರ್ಕಾರದ ರೀತಿ ನೀತಿಗಳನ್ನು, ಗಂಭೀರತೆಗಳನ್ನು, ಇತ್ತೀಚಿಗೆ ಅರ್ಥಮಾಡಿಕೊಳ್ಳುತ್ತಿರುವುದಕ್ಕೆ ಈಗಿನ ನಿದರ್ಶನವೇ ಸಾಕ್ಷಿ, ನಾನು ದಿನಾಂಕ: 3.7.2004ರ ಕಮರ್ಷಿಯಲ್ ಟ್ಯಾಕ್ಸ್ ಭಾಗ-1ರ ಪರೀಕ್ಷೆಗೆ ನೋಂದಣಿ ಸಂಖ್ಯೆ: 59518ರಡಿ ಹಾಜರಾಗಿದ್ದು ಆ ದಿನ ನಾನು ನನ್ನ ಎಲ್ಲಾ ರೀತಿಯ ಉತ್ತರಗಳನ್ನು ಬರೆದಿದ್ದು, ಮುಂದಿನ ಉತ್ತರವನ್ನು ಬರೆಯಲು ಅಸಹಾಯಕಳಾಗಿದ್ದು, ಮನೆಗೆ ಹೊರಡುವ ತರಾತುರಿಯಲ್ಲಿ ಟೇಬಲ್ ಮೇಲೆ, ಉತ್ತರ ಪತ್ರಿಕೆಗಳನ್ನು ಇಟ್ಟು ಸ್ವಾಭಾವಿಕ ಬಾಧೆ ತೀರಿಸಿಕೊಳ್ಳಲು ಹೊರಗಡೆ ಹೋಗಿದ್ದೆನು. ಈ ಸಂದರ್ಭದಲ್ಲಿ ಗಾಳಿಗೆ ಹಾರಿ ಪತ್ರಿಕೆಯು ಕೆಳಗೆ: ಬೇರೆ ಕಡೆ ಬಿದ್ದ ಬಗ್ಗೆ ನನಗೆ ತಿಳಿದಿರಲಿಲ್ಲ. ನಾನು ಹೊರಗೆ ಹೋಗಿ ಬಂದ ತಕ್ಷಣ ನನ್ನ ನೋಂದಣಿ ಸಂಖ್ಯೆಯನ್ನು ನನ್ನ ಸಹಾ ಪರೀಕ್ಷಾರ್ಥಿಯೊಬ್ಬರು ಕೂಗುತ್ತಿದ್ದುದ್ದು ಇದ್ದು ಕಂಡು ಬಂದ ಕೂಡಲೇ ಅದನ್ನು ಪಡೆದೆನು ಮತ್ತು ತಕ್ಷಣ ಅದನ್ನು ಕೊಠಡಿ ಪರಿವೀಕ್ಷಕರಿಗೆ ಪತ್ರಿಕೆಯನ್ನು ಕೊಟ್ಟು ಹೊರಟು ಹೋದೆನು. ಆದ್ದರಿಂದ ಬೇರೆಯವರ ಕಡೆಯಿಂದ ಉತ್ತರವನ್ನು ಬರೆಸಬೇಕೆಂಬ ಉದ್ದೇಶ ನನ್ನದಾಗಿರಲಿಲ್ಲ ಮತ್ತು ಉತ್ತರ ಬರೆಯುವ ತಾಳ್ಮೆಯನ್ನು ನಾನು ಕಳೆದುಕೊಂಡಿದ್ದು ಅದನ್ನು ಉತ್ತೀರ್ಣಗೊಳಿಸಿಕೊಳ್ಳಬೇಕೆಂಬ ಆಸೆಯೂ ತೀರಿ ಮುಂದಿನ ಪರೀಕ್ಷೆಯಲ್ಲಿ ಉತ್ತೀರ್ಣ ಆಗಬಹುದೆಂಬ ಬಯಕೆ ಹೊಂದಿ ಮೊದಲೇ ಬರೆದಿಟ್ಟಿದ್ದ ಉತ್ತರವೇ ಸಾಕು ಎಂದು ಉತ್ತರ ಪತ್ರಿಕೆಯನ್ನು ಕೊಡಲು ಸಿದ್ಧಳಾಗಿ ಹೊರಗಡೆ ಹೋಗಿ ಬಂದ ಮೇಲೆ ಕೊಡೋಣವೆಂದು ಕೊಂಡು ಹೋಗಿದ್ದು ಈ ಎಲ್ಲಾ ಅನರ್ಥಗಳಿಗೆ ಕಾರಣವಾಗಿರುತ್ತದೆ. ಕಾರಣ ಈ ಅವಘಡದಲ್ಲಿ ನನ್ನ ಮತ್ತು ನನ್ನ ಸಹ ಪರೀಕ್ಷಾರ್ಥಿಯವರ ಯಾವುದೇ ಉದ್ದೇಶವು ಘನ ಸರ್ಕಾರದ ಮತ್ತು ಕರ್ನಾಟಕ ಲೋಕ ಸೇವಾ ಆಯೋಗದ ನೀತಿಗಳನ್ನು ನಿರ್ಲಕ್ಷಿಸುವುದು ಆಗಿರುವುದಿಲ್ಲವೆಂಬುದನ್ನು ಸ್ಪಷ್ಟಪಡಿಸುತ್ತಾ ದಯವಿಟ್ಟು ದಯಾಳುಗಳಾದ ತಾವು ಈ ಪ್ರಮಾದವನ್ನು ಇಷ್ಟಕ್ಕೆ ನಿಲ್ಲಿಸಿ ನನ್ನನ್ನು ಮುಂದಿನ ಪರೀಕ್ಷೆಗಳಿಗೆ ಕೂಡಲು ಅವಕಾಶ ಮಾಡಿಕೊಟ್ಟು ನನ್ನ ಜೀವನಕ್ಕೆ ಪ್ರಕಾಶವನ್ನು ನೀಡುತ್ತಿರೆಂದು ಆಶಿಸುತ್ತಾ ಕಳಕಳಿಯ ವಿನಂತಿಯೊಂದಿಗೆ ಅದರ ಪೂರ್ವಕವಾಗಿ ಈ ನಿವೇದನೆಯನ್ನು ಸಲ್ಲಿಸುತ್ತೇವೆ.

**ಶ್ರೀ ಕುಮಾರ ಓ. ಪ್ರಥಮ ದರ್ಜೆ ಸಹಾಯಕರು, ಇವರ ಹೇಳಿಕೆ:**

ತಮ್ಮಲ್ಲಿ ಆಧಾರಗಳೊಂದಿಗೆ ಸಾದರಪಡಿಸುವುದೇನೆಂದರೆ, ನಾನು 2004ನೇ ಸಾಲಿನ ಮೊದಲನೇ ಅಧಿವೇಶನದ ಇಲಾಖಾ ಪರೀಕ್ಷೆಯಾದ ಕಮರ್ಷಿಯಲ್ ಟ್ಯಾಕ್ಸ್ ಭಾಗ-1 ಪತ್ರಿಕೆ ರ ದಿನಾಂಕ: 03.07.2004 ರಂದು ನಡೆದ ಪರೀಕ್ಷೆಯಲ್ಲಿ ಪ್ರಶ್ನೆ ಸಂಖ್ಯೆ:6ಕ್ಕೆ ಹಸ್ತಕ್ಷೇಪವಾಗಿರುವ ಬಗ್ಗೆ ಕಾರಣವೇನೆಂದರೆ, ನಾನು ಅವಸರದಿಂದ ಆಕ್ಟ್ ಬುಕ್ (ACT BOOK) ತೆಗೆಯಬೇಕಾದರೆ ಕೆಳಗೆ ಬಿದ್ದ ಉತ್ತರ ಪತ್ರಿಕೆಯನ್ನು ತೆಗೆದುಕೊಂಡು ನನ್ನ ಉತ್ತರ ಪತ್ರಿಕೆಯೆಂದು ಡಾಕುಮೆಂಟ್ ಆಫ್ ಟೈಟಲ್ ಗುಡ್ಸ್ ಎಂದು ಬರೆದಿದ್ದ ಪ್ರಶ್ನೆಗೆ ಉತ್ತರವನ್ನು ಹುಡುಕಿ ಅವಸರದಿಂದ ಉತ್ತರವನ್ನು ಬರೆದುಬಿಟ್ಟೆ ಆದಮೇಲೆ, ನಂತರ ನಾನು ಪ್ರಶ್ನೆ 6ಕ್ಕೆ ಮೊದಲೆ ಉತ್ತರಿಸಿದೆನಲ್ಲ ಇದು ಯಾರ ಉತ್ತರ ಪತ್ರಿಕೆ ಎಂದು ಪುಟ ತಿರುಗಿಸಿ ನೋಡಿದಾಗ ಅದು ನನ್ನ ಉತ್ತರ ಪತ್ರಿಕೆ ಆಗಿರಲಿಲ್ಲ. ಆಗ ನಾನು ಗಾಬರಿಗೊಂಡು ನನ್ನ ಉತ್ತರ ಪತ್ರಿಕೆ ಎಲ್ಲಿ ಹೋಯಿತೆಂದು ಹುಡುಕುವುದಕ್ಕೆ ಬೆಂಚ್ ಕೆಳಗೆ ನೋಡಿದಾಗ ಅದು ಬೆಂಚ್ ಅಡಿಯಲ್ಲಿ ಬಿದ್ದಿತ್ತು. ಆಗ ನಾನು ಉತ್ತರ ಪತ್ರಿಕೆ ಯಾರದೆಂದು ತಿರುಗಿಸಿ ನೋಡಿದಾಗ ಅದು 59518 ಅಭ್ಯರ್ಥಿಯದಾಗಿತ್ತು. ಗಾಬರಿಗೊಂಡ ನಾನು ಆ ಉತ್ತರವನ್ನು ರದ್ದುಪಡಿಸಲು ಆಗಲಿಲ್ಲ ತಕ್ಷಣ ಉತ್ತರ ಪ್ರತಿಯನ್ನು ಕೂಗಿ ಮರಳಿ ನೀಡಲಾಯಿತು ಮತ್ತು ಆ ಅಭ್ಯರ್ಥಿಗೆ ಉತ್ತರವನ್ನು ರದ್ದುಪಡಿಸಲು ತಿಳಿಸಲಾಯಿತು. ಅದು ಅವರ ಗಮನಕ್ಕೆ ಬಂದಿದೆಯೋ ಇಲ್ಲಯೋ ಅಥವಾ ಇಲ್ಲವೋ ಇದು ಯಾವುದೇ ಉದ್ದೇಶಪೂರ್ವಕವಾಗಿ ಹಾಗೂ ಕರ್ನಾಟಕ ಸರ್ಕಾರ ಮತ್ತು ಕರ್ನಾಟಕ ಲೋಕ ಸೇವಾ ಆಯೋಗದ ಕಾಯ್ದೆಯನ್ನು ಉಲ್ಲಂಘಿಸುವ ಉದ್ದೇಶವು ಆಗಿರುವುದಿಲ್ಲ ಇದು ನಜರ ಚೂಕಿನಿಂದ ಆಗಿದ್ದು, ಇದು ಘೋರ ತಪ್ಪಾಗಿರುವುದರಿಂದ ಕ್ಷಮೆ ಯಾಚಿಸುತ್ತಾ ಮುಂದೆ ಯಾವುದೇ ತರಹದ ನೋಟಿಸ್ ಜಾರಿಗೊಳಿಸದೆ ಇಲ್ಲಿಗೆ ಇದನ್ನು ಮುಕ್ತಾಯಗೊಳಿಸಬೇಕಾಗಿ ತಮ್ಮಲ್ಲಿ ವಿನಯಪೂರ್ವಕವಾಗಿ ವಿನಂತಿಸಿಕೊಳ್ಳುತ್ತೇನೆ ಮತ್ತು ಮುಂದಿನ ಅಧಿವೇಶನಕ್ಕೆ ಪರೀಕ್ಷೆಗೆ ಹಾಜರಾಗಲು ಅನುಮತಿ ಮಾಡಿಕೊಡಬೇಕೆಂದು ಮನವಿ ಮಾಡಿಕೊಳ್ಳುತ್ತೇನೆ.

ಆ ಇಬ್ಬರು ಅಭ್ಯರ್ಥಿಗಳ ಹೇಳಿಕೆಗಳು ತೃಪ್ತಿಕರವಾಗಿಲ್ಲದಿರುವುದರಿಂದ ಆಯೋಗವು ಕರ್ನಾಟಕ ಲೋಕ ಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳು 1965 ರನ್ವಯ ಅವರಿಗೆ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ತೀರ್ಮಾನಿಸಿ ಕೆಳಕಂಡಂತೆ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ: ಇಪ (1) 3793/2004-05 ಪಿಎಸ್‌ಸಿ(1) ಬೆಂಗಳೂರು, ದಿನಾಂಕ: 25ನೇ ಜನವರಿ 2005**

ಕರ್ನಾಟಕ ಲೋಕ ಸೇವಾ ಆಯೋಗದ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳು 1965ರ ನಿಯಮ 14 ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ: ಆ-398/93-94/ಪಿಎಸ್‌ಸಿ ದಿನಾಂಕ: 14.07.1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀಮತಿ ವೆಂಕಮ್ಮ ಉರುಫ್ ಸುಮಾ ಸಿ. ಕಟ್ಟಿಮನಿ, ದ್ವಿತೀಯ ದರ್ಜೆ ಸಹಾಯಕರು, ವಾಣಿಜ್ಯ ತೆರಿಗೆ ಅಧಿಕಾರಿಗಳ ಕಛೇರಿ, 2ನೇ ಉಪನಿಲಯ, ನವನಗರ, ಹುಬ್ಬಳ್ಳಿ, ಮತ್ತು ಶ್ರೀ ಕುಮಾರ ಓ. ಪ್ರಥಮ ದರ್ಜೆ ಸಹಾಯಕರು, ವಾಣಿಜ್ಯ ತೆರಿಗೆ ಅಧಿಕಾರಿಗಳ ಕಛೇರಿ, 4ನೇ ಉಪನಿಲಯ, ನವನಗರ, ಹುಬ್ಬಳ್ಳಿ, ಇವರುಗಳ 2004ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತನವನ್ನು ರದ್ದುಗೊಳಿಸಿದೆ ಹಾಗೂ ನಂತರದ 4 (ನಾಲ್ಕು) ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಿದೆ.

ಆಯೋಗದ ಆದೇಶದ ಮೇರೆಗೆ

ಪಿ.ಆರ್.190

ಕಾರ್ಯದರ್ಶಿ ಮತ್ತು ಪರೀಕ್ಷಾ ನಿಯಂತ್ರಕರು,

ಕರ್ನಾಟಕ ಲೋಕಸೇವಾ ಆಯೋಗ ಬೆಂಗಳೂರು.560001.

## ಕರ್ನಾಟಕ ಲೋಕ ಸೇವಾ ಆಯೋಗದ ನಡವಳಿಗಳು

**ವಿಷಯ :** 2004ನೇ ಸಾಲಿನ ಮೊದಲ ಅಧಿವೇಶನದ ಇಲಾಖಾ ಪರೀಕ್ಷೆಗೆ ಅಭ್ಯರ್ಥಿಯಾಗಿದ್ದ ಶ್ರೀ ಜಯರಾಮಪ್ಪ ಹೆಚ್. ಎನ್. ಇವರು ನಡೆಸಿದ ದುರಾಚಾರ-ದಂಡನೆ ವಿಧಿಸುವ ಕುರಿತು.

**ಓದಲಾಗಿದೆ :**
1. 2004ನೇ ಸಾಲಿನ ಮೊದಲ ಅಧಿವೇಶನದ ಇಲಾಖಾ ಪರೀಕ್ಷೆಗೆ ಶ್ರೀ ಜಯರಾಮಪ್ಪ ಇವರ ದಿನಾಂಕ: 12.5.2004ರ ಅರ್ಜಿ.
2. ಶ್ರೀ ಜಯರಾಮಪ್ಪ ಇವರಿಗೆ ಜಾರಿ ಮಾಡಿದ ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಹೆಚ್‌ಎಸ್:190:2004-05 ಪಿಎಸ್‌ಸಿ ದಿನಾಂಕ: 1.10.2004.
3. ಶ್ರೀ ಜಯರಾಮಪ್ಪ ಇವರು ನೀಡಿದ ದಿನಾಂಕ: 10.11.2004ರ ಹೇಳಿಕೆ ಪತ್ರ.

**ಪ್ರಸ್ತಾವನೆ:**

ಕರ್ನಾಟಕ ಲೋಕ ಸೇವಾ ಆಯೋಗವು ನಡೆಸಿದ 2004ನೇ ಸಾಲಿನ ಮೊದಲ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಶ್ರೀ ಜಯರಾಮಪ್ಪ ಹೆಚ್. ಎನ್., ದ್ವಿತೀಯ ದರ್ಜೆ ಸಹಾಯಕರು, ವಾಣಿಜ್ಯ ತೆರಿಗೆ ಜಂಟಿ ಆಯುಕ್ತರ ಕಛೇರಿ (ಇಂಟೆಲಿಜೆನ್ಸಿ) ಬೆಂಗಳೂರು, ಇವರು ಕಮರ್ಷಿಯಲ್ ಟ್ಯಾಕ್ಸಸ್ ಭಾಗ-1ರ ವಿಷಯದ ಪರೀಕ್ಷೆ ಬರೆಯಲು ಅರ್ಜಿಸಲ್ಲಿಸಿದ್ದು ಆ ಪರೀಕ್ಷೆ ಬರೆಯಲು ಅವರಿಗೆ ನೋಂದಣಿ ಸಂಖ್ಯೆ: 45805ರ ಪ್ರವೇಶ ಪತ್ರವನ್ನು ಜಾರಿ ಮಾಡಲಾಗಿತ್ತು. ಆ ಪರೀಕ್ಷೆಯನ್ನು ಅವರು ದಿನಾಂಕ: 3.7.2004 ರಂದು ಬರೆದಿದ್ದರು. ಆ ವಿಷಯದ ಉತ್ತರ ಪತ್ರಿಕೆಗಳ ಮೌಲ್ಯಮಾಪನ ಕಾರ್ಯವನ್ನು ಕೈಗೊಂಡಾಗ ಸದರಿ ಶ್ರೀ ಜಯರಾಮಪ್ಪ ರವರು ತಮ್ಮ ಉತ್ತರ ಪತ್ರಿಕೆಯ ಪುಟ-3 ಮತ್ತು ಪುಟ-5ರಲ್ಲಿ ತಮ್ಮ ಹೆಸರು ಮತ್ತು ನೋಂದಣಿ ಸಂಖ್ಯೆಯನ್ನು ನಮೂದಿಸಿರುವುದು ಆಯೋಗದ ಗಮನಕ್ಕೆ ಬಂದಿತು. ಆದಕಾರಣ ಅವರಿಗೆ ಮೇಲೆ (2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ ಅವರಿಗೆ ನೀಡಲಾದ ಪ್ರವೇಶ ಪತ್ರದ ಹಿಂಬದಿಯಲ್ಲಿ ಮುದ್ರಿಸಿರುವ "ಅಭ್ಯರ್ಥಿಗಳಿಗೆ ಸೂಚನೆಗಳು" ಎಂಬುದರ ಸೂಚನೆ-4ರಲ್ಲಿ ಹಾಗೂ ಉತ್ತರ ಪತ್ರಿಕೆಯಲ್ಲಿನ ಮುಖಪುಟದಲ್ಲಿ ಮುದ್ರಿಸಿರುವ "ಅಭ್ಯರ್ಥಿಗಳಿಗೆ ಸೂಚನೆಗಳು" ಎಂಬುದರ ಸೂಚನೆ-1ರಲ್ಲಿ ಅಭ್ಯರ್ಥಿಗಳು ಉತ್ತರ ಪತ್ರಿಕೆಯ ಒಳಭಾಗದಲ್ಲಿ ಮತ್ತು ಹೆಚ್ಚುವರಿ ಉತ್ತರ ಪತ್ರಿಕೆಯಲ್ಲಿ ಪ್ರಶ್ನೆಗಳಿಗೆ ಉತ್ತರಗಳನ್ನು ಮಾತ್ರ ಬರೆಯಬೇಕೇ ಹೊರತು ಇತರೇ ಯಾವುದೇ ರೀತಿಯ ಬರವಣಿಗೆ ಅಂದರೆ ತನ್ನನ್ನು ಪರಿವೀಕ್ಷಕರು ಗುರುತಿಸಿಕೊಳ್ಳುವ ಹಾಗೆ ನೋಂದಣಿ ಸಂಖ್ಯೆ, ಹೆಸರು ಇತ್ಯಾದಿಗಳು ಬರೆದಲ್ಲಿ ಕಠಿಣ ಶಿಕ್ಷೆಗೆ ಗುರಿಯಾಗುವುರೆಂದು ತಿಳಿಸಿದ್ದರೂ ಸಹ ಆ ಸೂಚನೆಗಳನ್ನು ಉಲ್ಲಂಘಿಸಿ ಕಮರ್ಷಿಯಲ್ ಟ್ಯಾಕ್ಸಸ್ ಭಾಗ-1 ಪತ್ರಿಕೆ-1ರ ವಿಷಯದ ಉತ್ತರ ಪತ್ರಿಕೆಯ ಒಳಪುಟಗಳಲ್ಲಿ ತಮ್ಮ ಹೆಸರು ಮತ್ತು ನೋಂದಣಿ ಸಂಖ್ಯೆಯನ್ನು ಬರೆದಿದ್ದಕ್ಕೆ ಕರ್ನಾಟಕ ಲೋಕ ಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) ನಿಯಮಗಳು 1965ರ ನಿಯಮ-14 ರಡಿಯಲ್ಲಿನ ಅಧಿಕಾರವನ್ನು ಚಲಾಯಿಸಿ ಆ ಅಧಿವೇಶನದ ಅವರ ಅಭ್ಯರ್ಥಿತನವನ್ನು ಏಕೆ ರದ್ದುಪಡಿಸಬಾರ ದೆಂಬುದರ ಬಗ್ಗೆ ಲಿಖಿತ ಸಮಜಾಯಿಷಿಯನ್ನು ನೀಡುವಂತೆ ಸೂಚಿಸಲಾಯಿತು.

ಶ್ರೀ ಜಯರಾಮಪ್ಪ ರವರು ಸದರಿ ನೋಟೀಸಿಗೆ ಉತ್ತರವಾಗಿ ದಿನಾಂಕ: 10.11.2004ರಲ್ಲಿ ತಿಳಿಸಿರುವ ಹೇಳಿಕೆಯನ್ನು ನೀಡಿ ತಾನು ನೋಂದಣಿ ಸಂಖ್ಯೆ ಮತ್ತು ಹೆಸರನ್ನು ಯಾವುದೇ ದುರುದ್ದೇಶಪೂರ್ವಕವಾಗಿ ಬರೆದಿಲ್ಲವೆಂದು ಅದು ಇಷ್ಟೊಂದು ಸಮಸ್ಯೆ ಆಗುತ್ತದೆ ಎಂಬ ಸಾಮಾನ್ಯ ಅರಿವು ಇರಲಿಲ್ಲವೆಂದು ತಾನು ಇಲಾಖಾ ನಿಬಂಧನೆಗಳನ್ನು ಸರಿಯಾಗಿ ಗಮನಿಸಿರಲಿಲ್ಲವೆಂದು ತಿಳಿಸುತ್ತ ಕ್ಷಮೆಯನ್ನು ಕೋರಿ ಮತ್ತೊಮ್ಮೆ ಇಂತಹ ತಪ್ಪುಗಳನ್ನು ಮಾಡದೇ ತಿದ್ದಿಕೊಳ್ಳುವ ಅವಕಾಶವನ್ನು ನೀಡುವಂತೆ ಕೋರಿರುತ್ತಾರೆ.

ಆಯೋಗವು ಶ್ರೀ ಜಯರಾಮಪ್ಪ ಇವರ ಹೇಳಿಕೆಯನ್ನು ಪರಿಶೀಲಿಸಿ ಅದು ತೃಪ್ತಿಕರವಾಗಿಲ್ಲದಿರುವುದರಿಂದ ಸಂಬಂಧಿತ ನಿಯಮಗಳನ್ವಯ ಅವರಿಗೆ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ತೀರ್ಮಾನಿಸಿ ಕೆಳಕಂಡಂತೆ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ: ಇಪ(1)3792/2004-05/ ಪಿಎಸ್‌ಸಿ(II) ಬೆಂಗಳೂರು, ದಿನಾಂಕ: 25ನೇ ಜನವರಿ 2005**

ಕರ್ನಾಟಕ ಲೋಕ ಸೇವಾ ಆಯೋಗದ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳು 1965ರ ನಿಯಮ-14 ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ: ಅ-398/93-94/ ಪಿಎಸ್‌ಸಿ ದಿನಾಂಕ: 14.07.1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಜಯರಾಮಪ್ಪ, ದ್ವಿತೀಯ ದರ್ಜೆ ಸಹಾಯಕರು, ವಾಣಿಜ್ಯ ತೆರಿಗೆ ಜಂಟಿ ಆಯುಕ್ತ ಕಛೇರಿ (ಇಂಟೆಲಿಜೆನ್ಸಿ), 80 ಅಡಿ ರಸ್ತೆ, ಬಿ.ಡಿ.ಎ. ಕಾಂಪ್ಲೆಕ್ಸ್ ಎದುರು, ಕೋರಮಂಗಲ, ಬೆಂಗಳೂರು-560 047, ಇವರಿಗೆ 2004ನೇ ಸಾಲಿನ ಮೊದಲ ಅಧಿವೇಶನದ ಇಲಾಖಾ ಪರೀಕ್ಷೆಗೆ ಅವರ ಅಭ್ಯರ್ಥಿತನವನ್ನು ರದ್ದುಪಡಿಸಿದೆ.

ಆಯೋಗದ ಆದೇಶದ ಮೇರೆಗೆ
ಕಾರ್ಯದರ್ಶಿ ಮತ್ತು ಪರೀಕ್ಷಾ ನಿಯಂತ್ರಕರು,
ಕರ್ನಾಟಕ ಲೋಕಸೇವಾ ಆಯೋಗ ಬೆಂಗಳೂರು.560001.

ಪಿ.ಆರ್.191

## ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ ಇವರ ನಡುವಳಿಗಳು

**ಉಪಸ್ಥಿತರು :** ಶ್ರೀ ಜಿ. ಪಿ. ಜಮಾದಾರ,
ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ

**ವಿಷಯ :** ಎಂಇಎಲ್-5307 (ಜಿ.ವಿ) ವಾಹನದ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :**
1. ವಾಹನ ಮಾಲೀಕರ ಅರ್ಜಿ ದಿನಾಂಕ: 17.11.2004.
2. ವಾಹನ ನಿರೀಕ್ಷಕರ ವರದಿ ದಿನಾಂಕ: 23.11.2004.

**ಪ್ರಸ್ತಾವನೆ:**

ಮೋಟಾರು ವಾಹನ ಸಂಖ್ಯೆ: ಎಂಇಎಲ್-5307 (ಜಿ.ವಿ) ವಾಹನದ ಮಾಲೀಕರು ವಾಹನ ತೆರಿಗೆಯನ್ನು ದಿನಾಂಕ: 31.03.03ರ ವರೆಗೆ ಪಾವತಿಸಿ, 01.04.2003 ರಿಂದ ವಾಹನವನ್ನು (ಅನುಪಯುಕ್ತತೆ) ಅದರ್ಪಣದಲ್ಲಿಟ್ಟಿರುತ್ತಾರೆ. ವಾಹನವು ಹಳೆಯದಾಗಿದ್ದು, ಹಾಗೂ ರಿಪೇರಿಯಾಗದ ಸ್ಥಿತಿಯಲ್ಲಿದೆ ಎಂಬ ಕಾರಣ ನೀಡಿ ನೋಂದಣಿ ರದ್ದುಪಡಿಸಲು ವಿನಂತಿಸಿಕೊಂಡಿದ್ದಾರೆ. ಅದಕ್ಕೆ ಪೂರಕವಾಗಿ ಈ ಕಛೇರಿಯ ವಾಹನ ನಿರೀಕ್ಷಕರು ತಮ್ಮ ವರದಿ ದಿನಾಂಕ: 23.11.2004ರಲ್ಲಿ ನೋಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿದ್ದಾರೆ. ಈ ಮೇಲಿನ ಅಂಶಗಳನ್ನು ಪರಿಗಣಿಸಿ, ಸದರಿ ವಾಹನದ ಮೇಲೆ ತೆರಿಗೆ ಬಾಕಿ ಲೆಕ್ಕ ಪತ್ರ ತನಿಖಾ ಆಕ್ಷೇಪಣೆ ಅಥವಾ ಡಿ.ಎನ್.ಎ. ಪ್ರಕರಣಗಳು ಏನಾದರೂ ಬಾಕಿ ಇರುವುದು ಕಂಡುಬಂದಲ್ಲಿ, ಸದರಿ

ವಾಹನದ ಮಾಲೀಕರೆ ಪಾವತಿಸಬೇಕೆಂಬ ನಿಬಂಧನೆಯೊಂದಿಗೆ ದಿನಾಂಕ: 23.11.2004 ರಿಂದ ಅನ್ವಯವಾಗುವಂತೆ ನೋಂದಣಿಯನ್ನು ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಸಂ:ಸಪ್ರಾಸಾಅ:ಬೈ:ನೋಂದಣಿ:ಎಂಇಎಲ್-5307:04-05 ದಿನಾಂಕ: 23ನೇ ನವೆಂಬರ್ 2004**

ಮೇಲ್ಕಂಡ ವಿಷಯವನ್ನು ಪರಿಗಣಿಸಿ, ಮೋಟಾರು ವಾಹನ ಕಾಯ್ದೆ 1988 ಕಲಂ 55ರ ಅಡಿಯಲ್ಲಿ ದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಅಧಿಕಾರಿ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶ್ರೀ ಜಿ. ಪಿ. ಜಮಾದಾರ ಆದ ನಾನು ವಾಹನ ಸಂಖ್ಯೆ: ಎಂಇಎಲ್-5307 (ಜಿ.ವಿ.) ವಾಹನದ ನೋಂದಣಿಯನ್ನು ದಿನಾಂಕ: 23.11.04 ರಿಂದ ಅನ್ವಯವಾಗುವಂತೆ ಸದರಿ ವಾಹನದ ನೋಂದಣಿಯನ್ನು ವಾಹನದ ಮೇಲೆ ಸರಕಾರಕ್ಕೆ ಬರಬೇಕಾದ ತೆರಿಗೆ ಬಾಕಿ ಏನಾದರೂ ಇದ್ದರೆ ಮಾಲೀಕರೇ ಪಾವತಿ ಮಾಡಬೇಕೆಂಬ ನಿಬಂಧನೆಯೊಂದಿಗೆ ರದ್ದುಪಡಿಸಲಾಗಿದೆ.

**ವಾಹನದ ವಿವರಗಳು:**

| | | | |
|---|---|---|---|
| 1) | ವಾಹನ ಸಂಖ್ಯೆ | : | ಎಂಇಎಲ್-5307 |
| 2) | ವರ್ಗ | : | ಸರಕು ವಾಹನ |
| 3) | ತಯಾರಕರ ಹೆಸರು | : | ಟಾಟಾ-1974 |
| 4) | ಅಡಿಗಟ್ಟು ಸಂಖ್ಯೆ | : | 344052-471476 |
| 5) | ಯಂತ್ರದ ಸಂಖ್ಯೆ | : | 692 ಡಿ02 4715192 |
| 6) | ಮಾಲೀಕರ ಹೆಸರು | : | ಶ್ರೀ ಬಸವರಾಜ ರುದ್ರಪ್ಪಾ ಪಾಟೀಲ, ಸಾ: ಹೊನ್ನಿದಿಬ್ಬ, ತಾ: ಬೈಲಹೊಂಗಲ. |

ಪಿ.ಆರ್.193 ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ.

## ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ ಇವರ ನಡುವಳಿಗಳು

**ಉಪಸ್ಥಿತರು :** ಶ್ರೀ ಜಿ. ಪಿ. ಜಮಾದಾರ,
ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ

**ವಿಷಯ :** ವಾಹನ ಸಂಖ್ಯೆ: ಕೆಎ-24:ಎಂ:129 ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1. ವಾಹನ ಮಾಲೀಕರ ಅರ್ಜಿ ದಿನಾಂಕ: 22.12.2004.
2. ವಾಹನ ನಿರೀಕ್ಷಕರ ವರದಿ ದಿನಾಂಕ: 31.12.2004.

**ಪ್ರಸ್ತಾವನೆ:**

ವಾಹನ ಸಂಖ್ಯೆ: ಕೆಎ-24:ಎಂ:129 ಮಾಲೀಕರು ಅನುಪಯುಕ್ತ ಅವಧಿಯಲ್ಲಿ ವಾಹನವು ತುಕ್ಕುಹಿಡಿದು ಹಾಳಾಗಿದೆ ಹಾಗೂ ರಿಪೇರಿಯಾಗದ ಸ್ಥಿತಿಯಲ್ಲಿದೆ ಎಂಬ ಕಾರಣ ನೀಡಿ ನೋಂದಣಿ ರದ್ದುಪಡಿಸಲು ವಿನಂತಿಸಿಕೊಂಡಿದ್ದಾರೆ. ಅದಕ್ಕೆ ಪೂರಕವಾಗಿ ಈ ಕಛೇರಿಯ ವಾಹನ ನಿರೀಕ್ಷಕರು ತಮ್ಮ ವರದಿ ದಿನಾಂಕ: 31.12.04 ರಲ್ಲಿ ನೋಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿದ್ದಾರೆ.

ಈ ಮೇಲಿನ ಅಂಶಗಳನ್ನು ಪರಿಗಣಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ ಸಂಖ್ಯೆ: ಸಪ್ರಾಸಾಅ:ನೋಂ:ಕೆಎ-24:ಎಂ-129:04-05 ದಿನಾಂಕ: 31ನೇ ಡಿಸೆಂಬರ್ 2004**

ಮೇಲ್ಕಂಡ ವಿಷಯವನ್ನು ಪರಿಗಣಿಸಿ, ಮೋಟಾರು ವಾಹನ ಕಾಯ್ದೆ 1988 ಕಲಂ 55ರ ಅಡಿಯಲ್ಲಿ ದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಅಧಿಕಾರಿ ಹಾಗೂ ಸಹಾಯಕ ಪ್ರಾ.ಸಾ.ಅ ಬೈಲಹೊಂಗಲ ಆದ ನಾನು ವಾಹನ ಸಂಖ್ಯೆ: ಕೆಎ-24:ಎಂ:129ಯ ವಾಹನದ ನೋಂದಣಿಯನ್ನು ದಿನಾಂಕ: 31.12.04 ರಿಂದ ಅನ್ವಯವಾಗುವಂತೆ ಸದರಿ ವಾಹನದ ನೋಂದಣಿಯನ್ನು ವಾಹನದ ಮೇಲೆ ಸರಕಾರಕ್ಕೆ ಬರಬೇಕಾದ ಬಾಕಿ ತೆರಿಗೆ ಏನಾದರೂ ಇದ್ದರೆ ಮಾಲೀಕರೇ ಪಾವತಿಮಾಡಬೇಕೆಂಬ ನಿಬಂಧನೆಯೊಂದಿಗೆ ರದ್ದುಪಡಿಸಲಾಗಿದೆ.

**ವಾಹನದ ವಿವರಗಳು:**

| | | | |
|---|---|---|---|
| 1) | ನೋಂದಣಿ ಸಂಖ್ಯೆ | : | ಕೆಎ-24:ಎಂ:129 |
| 2) | ವಾಹನದ ವರ್ಗ | : | ಎಲ್.ಎಂ.ವಿ. |
| 3) | ತಯಾರಕರ ಹೆಸರು | : | ಬಜಾಜ್ ಟೆಂಪೊ ಲಿಮಿಟೆಡ್ |
| 4) | ಅಡಿಗಟ್ಟು ಸಂಖ್ಯೆ | : | 616 ಎಫ್‌ಡಿ 72:472 |
| 5) | ಯಂತ್ರದ ಸಂಖ್ಯೆ | : | 616969 066890 |
| 6) | ಮಾಲೀಕರ ಹೆಸರು:ವಿಳಾಸ | : | ಶ್ರೀ ಈರಪ್ಪಾ ಬಸಪ್ಪಾ ಗೌಡರ ಸಾ: ಮುರಗೋಡ ತಾ: ಸವದತ್ತಿ |

ಪಿ.ಆರ್.194 ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ.

## ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ ಇವರ ನಡುವಳಿಗಳು

**ಉಪಸ್ಥಿತರು :** ಶ್ರೀ ಜಿ. ಪಿ. ಜಮಾದಾರ,
ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ

**ವಿಷಯ :** ಕೆಎ-24:1442 (ಮ್ಯಾಕ್ಸಿ ಕ್ಯಾಬ್) ವಾಹನದ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :** ವಾಹನ ಮಾಲೀಕರ ಅರ್ಜಿ ದಿನಾಂಕ: 17.12.2004.

**ಪ್ರಸ್ತಾವನೆ:**

ಮ್ಯಾಕ್ಸಿ ಕ್ಯಾಬ್ ವಾಹನ ಸಂಖ್ಯೆ: ಕೆಎ-24:1442ಕ್ಕೆ ಶ್ರೀ ಕೆ. ಬಿ. ರಾಜು, ಎಂಎಲ್‌ಬಿಸಿ ರಾಮದುರ್ಗ ಇವರು ವಾಹನ ಮಾಲೀಕರಾಗಿದ್ದು, ತೆರಿಗೆಯನ್ನು ದಿನಾಂಕ: 31.12.2004ರ ವರೆಗೆ ಪಾವತಿಸಿರುತ್ತಾರೆ. ಸದರಿ ವಾಹನವು ರಿಪೇರಿಯಾಗದ ಸ್ಥಿತಿಯಲ್ಲಿದ್ದು ವಾಹನದ ನೋಂದಣಿಯನ್ನು ರದ್ದುಪಡಿಸುವಂತೆ ಕೋರಿರುತ್ತಾರೆ. ಹಾಗೂ ಸದರಿ ವಾಹನವು ಪದೇ ಪದೇ ರಿಪೇರಿ ಬರುತ್ತಿರುವುದಾಗಿ ಮತ್ತು ತೆರಿಗೆಯನ್ನು ಪ್ರತಿ ಸಲ ತಡವಾಗಿ ದಂಡಸಹಿತವಾಗಿ ಪಾವತಿಸುತ್ತಿದ್ದು, ವಾಹನ ಮಾಲೀಕರ ಕೋರಿಕೆ ಮೇರೆಗೆ, ಸದರಿ ವಾಹನದ ಮೇಲೆ ತೆರಿಗೆ ಬಾಕಿ ಲೆಕ್ಕ ಪತ್ರ ತನಿಖಾ ಆಕ್ಷೇಪಣೆ

ಅಥವಾ ಡಿ. ಎಸ್.ಎ. ಪ್ರಕರಣಗಳು ಏನಾದರೂ ಬಾಕಿ ಇರುವುದು ಕಂಡುಬಂದಲ್ಲಿ, ಸದರಿ ವಾಹನ ಮಾಲೀಕರೇ ಪಾವತಿಸಬೇಕೆಂಬ ನಿಬಂಧನೆಯೊಂದಿಗೆ ದಿನಾಂಕ: 17.12.2004 ರಿಂದ ಅನ್ವಯವಾಗುವಂತೆ ನೋಂದಣಿಯನ್ನು ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ ಸಂ: ಸಪ್ರಾಸಾಅ:ಬೈ:ನೋಂ:ಕೆಎ-24:1442:04-05 ದಿನಾಂಕ: 17ನೇ ಡಿಸೆಂಬರ್ 2004**

ಮೇಲ್ಕಂಡ ವಿಷಯವನ್ನು ಪರಿಗಣಿಸಿ, ಮೋಟಾರು ವಾಹನ ಕಾಯ್ದೆ 1988 ಕಲಂ 55ರ ಅಡಿಯಲ್ಲಿ ದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಅಧಿಕಾರಿ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಶ್ರೀ ಬಿ. ಪಿ. ಜಮಾದಾರ ಆದ ನಾನು ವಾಹನ ಸಂಖ್ಯೆ: ಕೆಎ-24:1442 (ಮ್ಯಾಕ್ಸಿಕ್ಯಾಬ್) ವಾಹನದ ನೋಂದಣಿಯನ್ನು ದಿನಾಂಕ: 17.12.04 ರಿಂದ ಅನ್ವಯವಾಗುವಂತೆ ಸದರಿ ವಾಹನದ ನೋಂದಣಿಯನ್ನು ವಾಹನದ ಮೇಲೆ ಸರ್ಕಾರಕ್ಕೆ ಬರಬೇಕಾದ ಬಾಕಿ ತೆರಿಗೆ ಏನಾದರೂ ಇದ್ದರೆ ಮಾಲೀಕರೇ ಪಾವತಿ ಮಾಡಬೇಕೆಂಬ ನಿಬಂಧನೆಯೊಂದಿಗೆ ರದ್ದುಪಡಿಸಲಾಗಿದೆ.

**ವಾಹನದ ವಿವರಗಳು:**

1) ವಾಹನ ಸಂಖ್ಯೆ : ಕೆಎ-24:1442
2) ವರ್ಗ : ಮ್ಯಾಕ್ಸಿಕ್ಯಾಬ್
3) ತಯಾರಕರು : ಬಜಾಜ್ ಟೆಂಪೊ ಲಿಮಿಟೆಡ್
4) ಅಡಿಗಟ್ಟು ಸಂಖ್ಯೆ : 616 ಎಫ್‌ಡಿ 740592 ಎಲ್ 94
5) ಯಂತ್ರದ ಸಂಖ್ಯೆ : 616969 108518
6) ಮಾಲೀಕರ ಹೆಸರು : ಶ್ರೀ ಕೆ. ಬಿ. ರಾಜು ಎಂ.ಎಲ್.ಜಿ.ಸಿ. ಕಾಲೋನಿ, ರಾಮದುರ್ಗ.

ಪಿ.ಆರ್.195 ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ.

## ನೋಂದಣಿ ಪ್ರಾಧಿಕಾರ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ ಇವರ ನಡುವಳಿಗಳು

**ಉಪಸ್ಥಿತರು :** ಶ್ರೀ ಜಿ. ಪಿ. ಜಮಾದಾರ,
ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ

**ವಿಷಯ :** ವಾಹನ ಸಂಖ್ಯೆ: ಎಂಇಹೆಚ್-4742 ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1. ವಾಹನ ಮಾಲೀಕರ ಅರ್ಜಿ ದಿನಾಂಕ: 17.12.2004.
2. ವಾಹನ ನಿರೀಕ್ಷಕರ ವರದಿ ದಿನಾಂಕ: 31.12.2004.

**ಪ್ರಸ್ತಾವನೆ:**

ವಾಹನ ಸಂಖ್ಯೆ: ಎಂಇಹೆಚ್-4742 ಮಾಲೀಕರು ವಾಹನದ ತೆರಿಗೆಯನ್ನು 31.12.2004 ವರೆಗೆ ಪಾವತಿಸಿ, ವಾಹನವು ತುಕ್ಕುಹಿಡಿದು ಹಾಳಾಗಿದೆ ಹಾಗೂ ರಿಪೇರಿಯಾಗದ ಸ್ಥಿತಿಯಲ್ಲಿದೆ ಎಂಬ ಕಾರಣ ನೀಡಿ ನೋಂದಣಿ ರದ್ದುಪಡಿಸಲು ವಿನಂತಿಸಿಕೊಂಡಿದ್ದಾರೆ. ಅದಕ್ಕೆ ಪೂರಕವಾಗಿ ಈ ಕಚೇರಿಯ ವಾಹನ ನಿರೀಕ್ಷಕರು ತಮ್ಮ ವರದಿ ದಿನಾಂಕ: 31.12.04 ರಲ್ಲಿ ನೋಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿದ್ದಾರೆ.

ಈ ಮೇಲಿನ ಅಂಶಗಳನ್ನು ಪರಿಗಣಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ ಸಂ: ಸಪ್ರಾಸಾಅ:ನೊಂ:ಎಂಇಹೆಚ್-4742:04-05 ದಿನಾಂಕ: 31ನೇ ಡಿಸೆಂಬರ್ 2004**

ಮೇಲ್ಕಂಡ ವಿಷಯವನ್ನು ಪರಿಗಣಿಸಿ, ಮೋಟಾರು ವಾಹನ ಕಾಯ್ದೆ 1988 ಕಲಂ 55ರ ಅಡಿಯಲ್ಲಿ ದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಅಧಿಕಾರಿ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬಳ್ಳಾರಿ ಆದ ನಾನು ವಾಹನ ಸಂಖ್ಯೆ: ಎಂಇಹೆಚ್-4742ಯ ವಾಹನದ ನೋಂದಣಿಯನ್ನು ದಿನಾಂಕ: 31.12.04 ರಿಂದ ಅನ್ವಯವಾಗುವರೆಗೆ ಸದರಿ ವಾಹನದ ನೋಂದಣಿಯನ್ನು ವಾಹನದ ಮೇಲೆ ಸರಕಾರಕ್ಕೆ ಬರಬೇಕಾದ ಬಾಕಿ ತೆರಿಗೆ ಏನಾದರೂ ಇದ್ದರೆ ಮಾಲೀಕರೇ ಪಾವತಿಮಾಡಬೇಕೆಂಬ ನಿಬಂಧನೆಯೊಂದಿಗೆ ರದ್ದುಪಡಿಸಲಾಗಿದೆ.

**ವಾಹನದ ವಿವರಗಳು:**

1) ನೋಂದಣಿ ಸಂಖ್ಯೆ : ಎಂಇಹೆಚ್-4742
2) ವಾಹನದ ವರ್ಗ : ಡೆಲಿವರಿ ವ್ಯಾನ್:ಎಲ್‌ಜಿವಿ
3) ತಯಾರಕರ ಹೆಸರು : ಮೆಟಾಡೋರ್
4) ಅಡಿಗಟ್ಟು ಸಂಖ್ಯೆ : 3 ಎಫ್‌ಡಿ 265877
5) ಯಂತ್ರದ ಸಂಖ್ಯೆ : ಡಿ 264888
6) ಮಾಲೀಕರ ಹೆಸರು: ವಿಳಾಸ : ಶ್ರೀ ರಾಜು ಗುರುಪುತ್ರಪ್ಪಾ ಚೌಗಳ್ಳಿ, ಸಾ: ಸೋಮವಾರಪೇಟೆ, ಕಿತ್ತೂರ, ಬೈಲಹೊಂಗಲ.

ಪಿ.ಆರ್.196 ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೈಲಹೊಂಗಲ.

## ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿಕ್ಕಮಗಳೂರು ರವರ ನಡವಳಿಗಳು

**ಉಪಸ್ಥಿತರು :** ಶ್ರೀ ಆರ್. ರಾಜಶೇಖರ್
ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿಕ್ಕಮಗಳೂರು.

**ವಿಷಯ :** ಅಧ್ಯರ್ಪಣದಲ್ಲಿರುವ ಮೋ.ವಾ.ಸಂ:ಸಿಎಎ-3901 ಭಾರಿ ಸರಕುವಾಹನದ ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1. ಮಾಲೀಕರಾದ ಶ್ರೀ ಚಂದ್ರಯ್ಯ ಬಿನ್ ಲೇ. ಪರ್ವತಯ್ಯ, ಗೂಡ್ಸ್ ಶೆಡ್ ರಸ್ತೆ, ತರೀಕೆರೆ ರವರ ಅರ್ಜಿ ದಿನಾಂಕ: 28.10.04,
2. ಎಸ್.ಆರ್. ನಂ.54:03, ದಿನಾಂಕ: 28.01.04. ರಿಂದ.
3. ಮೋ ವಾ ನಿ ವರದಿ ದಿನಾಂಕ: 16.11.04.

**ಪ್ರಸ್ತಾವನೆ:**

ವಾಹನ ಸಂಖ್ಯೆ: ಸಿಎಎ-3901 ಭಾರಿ ಸರಕು ವಾಹನ, ಇದರ ನೊಂದಾಯಿತ ಮಾಲೀಕರಾದ ಶ್ರೀ ಚಂದ್ರಯ್ಯ ಬಿನ್ ಲೇ. ಪರ್ವತಯ್ಯ ಹೇಮಾವತಿ ಸಾರಿಗೆ, ಗೂಡ್ಸ್ ಶೆಡ್ ರಸ್ತೆ, ತರೀಕೆರೆ ರವರು ಈ ವಾಹನಕ್ಕೆ ತೆರಿಗೆಯನ್ನು 31.01.04 ರವರೆಗೆ ಪಾವತಿಸಿ ಮುಂದಿನ ಅವಧಿ ತೆರಿಗೆ ಪಾವತಿಯಿಂದ ವಿನಾಯಿತಿಗಾಗಿ ದಾಖಲೆಗಳನ್ನು ವಾಹನದ ಅನುಪಸ್ಥಿತಿಯೊಂದಿಗೆ ದಿನಾಂಕ: 28.1.04 ರಿಂದ ಅಧ್ಯರ್ಪಣ ಸಂ:54:03ರ ಅಡಿಯಲ್ಲಿ ಅಧ್ಯರ್ಪಿಸಿರುತ್ತಾರೆ. ಸದರಿಯವರು ಕಛೇರಿಗೆ ದಿನಾಂಕ: 28.10.04 ರಂದು ಅರ್ಜಿ ನೀಡಿ, ಈ ವಾಹನವು ಹಳೆಯದಾಗಿದ್ದು, ದುರಸ್ಥಿ ದುಬಾರಿ ಆಗಿರುವುದರಿಂದ ಹಾಗೂ ವಾಹನವು ರಸ್ತೆಯಲ್ಲಿ ಓಡಿಸಲು ಅನರ್ಹವಾಗಿರುವುದರಿಂದ ನೋಂದಣಿ ಹಾಗೂ ನೋಂದಣಿ ಪತ್ರ ರದ್ದುಪಡಿಸಬೇಕೆಂದು ಕೋರಿದ್ದಾರೆ. ಪೂರಕವಾಗಿ ಕಛೇರಿಯ ಮೋ.ವಾ.ನಿ. ರವರು ಸದರಿವಾಹನ ಪರಿಶೀಲಿಸಿ ಕಛೇರಿಗೆ ದಿನಾಂಕ: 16.11.04 ರಂದು ಸಲ್ಲಿಸಿದ ವರದಿಯಲ್ಲಿ ಈ ವಾಹನದ ನೋಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿದ್ದಾರೆ. ಆದ್ದರಿಂದ ಈ ವಾಹನದ ನೋಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

**ಸಂ:ಪ್ರಾಸಾಅ:ಚಿಮ:ನೊಂ:ಸಿಎಎ-3901:04-05 ದಿನಾಂಕ: 26ನೇ ನವೆಂಬರ್ 2004**

ಕೇಂದ್ರ ಮೋಟಾರು ವಾಹನ ಕಾಯ್ದೆ 1988ರ ಕಲಂ 55ರಲ್ಲಿ ನನಗೆ ದತ್ತವಾದ ಅಧಿಕಾರದ ಮೇರೆಗೆ ಆರ್ ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿಕ್ಕಮಗಳೂರು ಆದ ನಾನು ಸಿಎಎ-3901 ಭಾರಿ ಸರಕು ವಾಹನದ ನೋಂದಣಿ ಹಾಗೂ ನೋಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಲೆಕ್ಕ ಪರಿಶೋಧನೆಯ ಸಮಯದಲ್ಲಿ ಸರ್ಕಾರಕ್ಕೆ ಬರಬೇಕಾದ ಬಾಕಿ ಏನಾದರೂ ಕಂಡು ಬಂದಲ್ಲಿ ಮಾಲೀಕರು ಪಾವತಿಸಲು ಬದ್ಧರೆಂಬ ಷರತ್ತಿನೊಂದಿಗೆ ನೋಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು:**

| | | | |
|---|---|---|---|
| 1. | ವಾಹನ ಸಂಖ್ಯೆ | : | ಸಿಎಎ-3901 |
| 2. | ವರ್ಗ | : | ಭಾರಿ ಸರಕು ವಾಹನ |
| 3. | ತಯಾರಿಕೆ | : | ಅಶೋಕ ಲೈಲ್ಯಾಂಡ್ |
| 4. | ಮಾಡೆಲ್ | : | 1983 |
| 5. | ಚಾಸಿಸ್ ಸಂಖ್ಯೆ | : | ಎಎಲ್‌ಇಎಫ್ 156254 |
| 6. | ಯಂತ್ರ ಸಂ | : | ಎಎಲ್‌ಇಎಫ್ 14353 |
| 7. | ನೋಂದಣಿ ದಿನಾಂಕ: 25.08.83 | : | |
| 8. | ಹೆಚ್‌ಪಿಎ | : | ಹೊಂದಿರುವುದಿಲ್ಲ. |
| 9. | ಮಾಲೀಕರು | : | ಶ್ರೀ ಚಂದ್ರಯ್ಯ ಬಿನ್ ಪರ್ವತಯ್ಯ, ಪ್ರೋ. ಹೇಮಾವತಿ ಟ್ರಾನ್ಸ್‌ಪೋರ್ಟ್ ಗೂಡ್ಸ್‌ಶೆಡ್ ರಸ್ತೆ, ತರೀಕೆರೆ ತಾ, ಚಿಕ್ಕಮಗಳೂರು. |

ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,
ಚಿಕ್ಕಮಗಳೂರು.

ಪಿ.ಆರ್.197

**ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಇವರ ನಡುವಳಿಗಳು**

**ಉಪಸ್ಥಿತರು :** ಶ್ರೀ ಆರ್. ರಾಜಶೇಖರ್
ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು.

**ವಿಷಯ :** ಎಂಇಜಿ-5318 ಭಾರಿ ಸರಕುವಾಹನದ ನೋಂದಣಿ ಹಾಗೂ ನೋಂದಣಿ ಪತ್ರ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1. ಮಾಲೀಕರಾದ ಶ್ರೀ ಕೆ. ಎಸ್. ಕಾಡಪ್ಪಗೌಡ ಬಿನ್ ಸಿದ್ದಪ್ಪಗೌಡ, ಪಿಡಬ್ಲ್ಯೂಡಿ ಗುತ್ತಿಗೆದಾರರು, ನಾರ್ವೆ, ಕೊಪ್ಪ ತಾ: ರವರ ಅರ್ಜಿ ದಿನಾಂಕ: 29.10.04 ಹಾಗೂ ದಿನಾಂಕ: 20.11.04.
2. ಕಛೇರಿ ಮೋವಾ ನಿ ವರದಿ: 29.10.04.

**ಪ್ರಸ್ತಾವನೆ:**

ಶ್ರೀ ಕೆ. ಎಸ್. ಕಾಡಪ್ಪಗೌಡ ಬಿನ್ ಸಿದ್ದಪ್ಪಗೌಡ, ಪಿಡಬ್ಲ್ಯೂಡಿ ಗುತ್ತಿಗೆದಾರರು, ನಾರ್ವೆ, ಕೊಪ್ಪ ತಾಲ್ಲೂಕು ಚಿಕ್ಕಮಗಳೂರು ಜಿಲ್ಲೆ ರವರು ಈ ಕಛೇರಿಯಲ್ಲಿ ಎಂಇಜಿ-5318 ಭಾರಿ ಸರಕು ವಾಹನದ ನೊಂದಾಯಿತ ಮಾಲೀಕರಾಗಿದ್ದು, ಈ ವಾಹನದ ತೆರಿಗೆಯನ್ನು ದಿನಾಂಕ: 30.11.04ರ ವರೆಗೆ ಪಾವತಿಸಿರುತ್ತಾರೆ. ಸದರಿಯವರು ಕಛೇರಿಗೆ ದಿನಾಂಕ: 29.10.04 ಹಾಗೂ ದಿನಾಂಕ: 20.11.04 ರಂದು ಈ ವಾಹನದ ದಾಖಲೆ ಪತ್ರಗಳೊಂದಿಗೆ ಅರ್ಜಿ ನೀಡಿ ಈ ವಾಹನವು ಹಳೆಯದಾಗಿದ್ದು, ದುರಸ್ಥಿ ಕಾರ್ಯ ದುಬಾರಿ ಆಗಿದ್ದು, ರಸ್ತೆಯಲ್ಲಿ ಓಡಾಡಲು ಅನರ್ಹವಿರುವುದಾಗಿ ತಿಳಿಸಿ, ಈ ವಾಹನದ ನೋಂದಣಿ ಹಾಗೂ ನೋಂದಣಿ ಪತ್ರ ರದ್ದುಪಡಿಸಲು ಕೋರಿಕೆ ಸಲ್ಲಿಸಿರುತ್ತಾರೆ. ಪೂರಕವಾಗಿ ಈ ಕಛೇರಿಯ ಮೋಟಾರು ವಾಹನ ನಿರೀಕ್ಷಕರು ಈ ವಾಹನ ಪರಿಶೀಲಿಸಿ ಕಛೇರಿಗೆ ದಿನಾಂಕ: 29.10.04 ರಂದು ನೀಡಿದ ವರದಿಯಲ್ಲಿ ಈ ವಾಹನ ಹಳೆಯದಾಗಿದ್ದು, ನೋಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿದ್ದಾರೆ. ಆದ್ದರಿಂದ ಈ ವಾಹನದ ನೋಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

**ಸಂ: ಪ್ರಾಸಾಅ:ಚಿಮ:ನೊಂ:ಎಫ್‌ಟಿಟಿ:ಎಂಇಜಿ-5318:04-05 ದಿನಾಂಕ: 26ನೇ ನವೆಂಬರ್ 2004**

ಕೇಂದ್ರ ಮೋಟಾರು ವಾಹನ ಕಾಯ್ದೆ 1988ರ ಕಲಂ 55 ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಆರ್ ರಾಜಶೇಖರ್, ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿಕ್ಕಮಗಳೂರು ಆದ ನಾನು ಎಂಇಜಿ-5318, ಭಾರಿ ಸರಕು ವಾಹನದ ನೋಂದಣಿ ಹಾಗೂ ನೋಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಲೆಕ್ಕ ಪರಿಶೋಧನೆಯಿಂದ ಸರ್ಕಾರಕ್ಕೆ ಬರಬೇಕಾದ ಬಾಕಿಗಳು ಏನಾದರೂ ಪಾವತಿಸಲು ಕಂಡುಬಂದಲ್ಲಿ ಮಾಲೀಕರೇ ಪಾವತಿಸಲು ಬದ್ಧರೆಂಬ ಷರತ್ತಿನೊಂದಿಗೆ ಈ ವಾಹನದ ನೋಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು:**

| | | | |
|---|---|---|---|
| 1. | ವಾಹನ ಸಂಖ್ಯೆ | : | ಎಂಇಜಿ-5318 |
| 2. | ವರ್ಗ | : | ಭಾರಿ ಸರಕು ವಾಹನ |
| 3. | ಮಾಡೆಲ್ | : | 1979 |
| 4. | ಚಾಸಿಸ್ ಸಂಖ್ಯೆ | : | 344073904942 |
| 5. | ಇಂಜಿನ್ ಸಂಖ್ಯೆ | : | 692 ಡಿ 01 704828 |
| 6. | ನೋಂದಣಿ ದಿನಾಂಕ | : | 8.3.79 |
| 7. | ತೆರಿಗೆ | : | 30.11.04 |
| 8. | ಕಂತು ಕರಾರು | : | ಹೊಂದಿರುವುದಿಲ್ಲ. |
| 9. | ಮಾಲೀಕರು | : | ಶ್ರೀ ಕೆ. ಎಸ್. ಕಾಡಪ್ಪಗೌಡ ಬಿನ್ ಸಿದ್ದಪ್ಪಗೌಡ, ಪಿಡಬ್ಲ್ಯುಡಿ ಕಂಟ್ರಾಕ್ಟರ್, ಪಿ.ಬಿ.ನಂ.51, ನಾರ್ವೆ ಅಂಚೆ, ಕೊಪ್ಪ ತಾ, ಚಿಕ್ಕಮಗಳೂರು ಜಿಲ್ಲೆ. |

ನೋಂದಣಿ ಪ್ರಾಧಿಕಾರ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು,
ಚಿಕ್ಕಮಗಳೂರು.

ಪಿ.ಆರ್.198

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2 ಬಿಜಾಪುರ

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಮಪ್ರ:ಎಸ್‌ಆರ್-219:2004 ದಿನಾಂಕ: 12ನೇ ಜನವರಿ 2005**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು:**

ಚಂದ್ರಕಲಾ ಗಂಡ ಗೌಡಪ್ಪ ಬಿರಜದಾರ
ವಾಸ: ಪಕ್ಕನಪೂರ ತಾಲ್ಲೂಕ್: ಜಿಲ್ಲೆ-ಬಿಜಾಪುರ

1. ರಾಧ ಎಲ್. ತೋಟಾ
ವಾಸ: 303, ಮೋನಿಕಾ ಟವರ್ಸ್ ಚಂದನ ಪಾರ್ಕ್ ಭಯಾಂದರ ಧಾಣೆ-401105 (ಮಹಾರಾಷ್ಟ್ರ ರಾಜ್ಯ).

**ಪ್ರಕಟಣೆ**

ಶ್ರೀ:ಶ್ರೀಮತಿ: ಚಂದ್ರಕಲಾ ಗಂಡ ಗೌಡಪ್ಪ ಬಿರಜದಾರ ಇವರುಗಳಾದ ತಾವು ಮೃತ ಗೌಡಪ್ಪ ತಂದೆ ಸಾಯಬಣ್ಣ ಬಿರಜದಾರ ಇವರ ಹೆಂಡತಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತಗೌಡಪ್ಪ ತಂದೆ ಸಾಯಬಣ್ಣ ಬಿರಜದಾರ ಇವರು ಒಂದನೇ ಪ್ರತಿವಾದಿಗಳಾದ ರಾಧ ಎಲ್ ತೋಟಾ ಇವರ ಮಾರುತಿ ವ್ಯಾನ್ ನಂ. ಎಮ್‌ಹೆಚ್-04:ಎಎಸ್-6256 ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ದ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು ಉಪ ವಿಭಾಗ-2,
ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್.199

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಮಂಡ್ಯ ಉಪವಿಭಾಗ-2 ಮಂಡ್ಯ

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-151:2004**

**ಅರ್ಜಿದಾರರು :** **ವಿರುದ್ಧ** **ಪ್ರತಿವಾದಿಗಳು:**

1. ನಿಂಗಮ್ಮ ಕೋಂ ಸಣ್ಣೆಗೌಡ
ವಾಸ: ಮಂಚಿಪಟ್ಟಣ ವಿಲೇಜ್ ಹೊನ್ನೆಕೆರೆ ಹೋಬಳಿ ನಾಗಮಂಗಲ ತಾ:
2. ಸಣ್ಣೆಗೌಡ ಬಿನ್ ನರಸಿಂಹೇಗೌಡ
ವಾಸ: ಮಂಚಿಪಟ್ಟಣ ವಿಲೇಜ್ ಹೊನ್ನಕೆರೆ ಹೋಬಳಿ ನಾಗಮಂಗಲ ತಾ:

1. ಮ್ಯಾನೇಜಿಂಗ್ ಪಾರ್ಟನರ್
ಮೆ:ಚುಗಿರಿ ಮಿನರಲ್ ಕಾರ್ಪೊರೇಷನ್ ನಂ. 77 ಮತ್ತು 89 ಗಂಗಸಮುದ್ರ ವಿಲೇಜ್, ನಾಗಮಂಗಲ ತಾ ಮಂಡ್ಯ ಜಿಲ್ಲೆ.
2. ಮ್ಯಾನೇಜರ್
ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಡಿ.01 ಸಿಎಸ್‌ಐ ಜಾಯ್ ಕಾಂಪ್ಲೆಕ್ಸ್ ಸಯ್ಯಾಜಿರಾವ್ ರಸ್ತೆ ಮೈಸೂರು.

**ಅಧಿಸೂಚನೆ**

ಅರ್ಜಿದಾರರಾದ ನಿಂಗಮ್ಮ, ಸಣ್ಣೆಗೌಡ ಅವರು ತಮ್ಮ ಗಂಡ: ಮಗನಾದ ಶ್ರೀ ಸತೀಶ್ ಅವರು ಒಂದನೇ ಪ್ರತಿವಾದಿ ಶ್ರೀ:ಶ್ರೀಮತಿ ಮೆ: ಚುಗಿರಿ ಮಿನರಲ್ ಕಾರ್ಪೊರೇಷನ್ ರವರ ಬಳಿ ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 4.11.04 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದರೆ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ

30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 4.1.2005 ರಂದು ನೀಡಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು

ಪಿ.ಆರ್.200 ಮಂಡ್ಯ ಉಪವಿಭಾಗ-2, ಮಂಡ್ಯ -571401.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ರವರ ನಡವಳಿಗಳು

**ಸಂಖ್ಯೆ: ಜಿಆರ್‌ಬಿ:ಎಲ್‌ಕ್ಯೂಡಿ:32:ಎಲ್‌ಎಂಸಿ:2004-05 ದಿನಾಂಕ: 17ನೇ ಜನವರಿ 2005**

**ವಿಷಯ :** ನಿಷ್ಕ್ರಿಯಗೊಂಡ ಭದ್ರಾವತಿ ತಾಲ್ಲೂಕು ಕಬ್ಬಿನ ಗಾಣವನ್ನು ಹೊಂದಿರುವ ರೈತರ ಸಹಕಾರ ಸಂಘ (ನಿ), ಭದ್ರಾವತಿ ಇದರ ಸಮಾಪನೆ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ ಇವರ ಪ್ರಸ್ತಾವೆ ಸಂಖ್ಯೆ: ಡಿಆರ್‌ಎಸ್:ಸಮಾಪನೆ: ಡಿಎಲ್‌ಎಸ್:772:04-05, ದಿನಾಂಕ: 09.12.2004.

**ಪ್ರಸ್ತಾವನೆ:**

ಭದ್ರಾವತಿ ತಾಲ್ಲೂಕು ಕಬ್ಬಿನ ಗಾಣವನ್ನು ಹೊಂದಿರುವ ರೈತರ ಸಹಕಾರ ಸಂಘ (ನಿ), ಭದ್ರಾವತಿ ಈ ಸಹಕಾರ ಸಂಘವು ನೋಂದಣಿ ಸಂಖ್ಯೆ: 20468:2000, ದಿನಾಂಕ: 12.05.2000 ರಲ್ಲಿ ನೋಂದಣಿಯಾಗಿದ್ದು, ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟದ್ದಾಗಿರುತ್ತದೆ. ಈ ಸಂಘವು ನೋಂದಾವಣಿಯಾದ ಉದ್ದೇಶಗಳಿಗೆ ಪೂರಕವಾಗಿ ಕಾರ್ಯನಿರ್ವಹಿಸದೇ ಪ್ರಾರಂಭದಿಂದಲೂ ಸ್ಥಗಿತಗೊಂಡಿರುತ್ತದೆ. ಈ ಸಂಘವು 2002-03ನೇ ಸಾಲಿನ ವಾರ್ಷಿಕ ಮಹಾಸಭೆ ನಡೆಸದ ಕಾರಣ ಸಂಘದ ಆಡಳಿತ ಮಂಡಳಿಯ ಸದಸ್ಯರನ್ನು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ: 27(2) ರನ್ವಯ ವಜಾಮಾಡಿ, ಕಲಂ:31 (1) ರನ್ವಯ ವಿಶೇಷಾಧಿಕಾರಿಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರು ದಿನಾಂಕ: 28.12.2003 ರಂದು ನೇಮಿಸಿರುತ್ತಾರೆ. ದಿನಾಂಕ: 19.06.2004 ರಂದು ಪ್ರಭಾರ ಪಡೆದಿರುವ ವಿಶೇಷಾಧಿಕಾರಿಯು ಈ ಸಂಘದ ಸದಸ್ಯರಿಗಾಗಲೀ ಹಿಂದಿನ ಆಡಳಿತ ಮಂಡಳಿ ಸದಸ್ಯರಿಗಾಗಲೀ ಸಂಘದ ಪುನಃ ಶ್ಚೇತನದ ಬಗ್ಗೆ ಆಸಕ್ತಿ ಇಲ್ಲವೆಂದು, ಇದನ್ನು ಸಮಾಪನೆಗೊಳಿಸಬೇಕೆಂದು ಶಿಫಾರಸ್ಸು ಮಾಡಿದ್ದಾರೆ. ಸಂಘದಲ್ಲಿನ 101 ಜನ ಸದಸ್ಯರಿಂದ ಸಂಗ್ರಹಿಸಿದ ಷೇರುಹಣ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನಲ್ಲಿ ಇರುತ್ತದೆ. ಸಂಘದ ಲೆಕ್ಕ ಪತ್ರಗಳು ಪ್ರಾರಂಭದಿಂದಲೂ ತಪಾಸಣೆಯಾಗಿಲ್ಲ. ಈ ಕಾರಣಗಳಿಂದಾಗಿ ಸಂಘವನ್ನು ಸಮಾಪನೆಗೊಳಿಸಬೇಕೆಂದು ಉಲ್ಲೇಖದಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು ಶಿಫಾರಸ್ಸು ಮಾಡಿದ್ದಾರೆ.

ಪ್ರಸ್ತಾವೆಯನ್ನು ಪರಿಶೀಲಿಸಲಾಗಿದ್ದು, ಸಂಘದ ಸದಸ್ಯರಿಗೆ ಸಂಘದ ಚಟುವಟಿಕೆಗಳಲ್ಲಿ ಆಸಕ್ತಿ ಇಲ್ಲದಿರುವುದನ್ನು ಗಮನಿಸಲಾಗಿದ್ದು, ಈ ಸಂಘದಿಂದ ಸದಸ್ಯರಿಗಾಗಲೀ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನವಿಲ್ಲವೆಂದು, ಸಂಘದ ಪುನಃಶ್ಚೇತನ ಸಾಧ್ಯವಿಲ್ಲದಿರುವುದರಿಂದ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಮನಗಂಡು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ: 72(2) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್‌ಎಂ:2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ್ಯ ಬೆಂಗಳೂರು ಆದ ನಾನು ಭದ್ರಾವತಿ ತಾಲ್ಲೂಕು ಕಬ್ಬಿನ ಗಾಣವನ್ನು ಹೊಂದಿರುವ ರೈತರ ಸಹಕಾರ ಸಂಘ (ನಿ), ಭದ್ರಾವತಿ ಈ ಸಹಕಾರ ಸಂಘವನ್ನು ಈ ಕೂಡಲೇ ಜಾರಿಗೆ ಬರುವಂತೆ ಸಮಾಪನೆಗೊಳಿಸಿ, ಕಲಂ: 73 ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಭದ್ರಾವತಿ ತಾಲ್ಲೂಕು, ಭದ್ರಾವತಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ನೇಮಕಗೊಂಡ ಸಮಾಪನಾಧಿಕಾರಿಯು ಸಂಘದ ಪ್ರಭಾರವನ್ನು ಕೂಡಲೇ ಪಡೆದುಕೊಂಡು, ಸಂಘದ ಆಸ್ತಿ-ಜವಾಬ್ದಾರಿಗಳನ್ನು ನಿಯಮಾನುಸಾರ ವಿಲೆಗೊಳಿಸಿ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಲು ಈ ಆದೇಶದ ದಿನಾಂಕದಿಂದ 90 (ತೊಂಭತ್ತು) ದಿನಗಳ ಒಳಗಾಗಿ ಪ್ರಸ್ತಾವೆಯನ್ನು ಯುಕ್ತದ್ವಾರದ ಮುಖಾಂತರ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 17ನೇ ಜನವರಿ 2005 ರಂದು ಸ್ವಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

**ಬಸವೇಗೌಡ**

ಪಿ.ಆರ್.201 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

## ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ

**ಸಂಖ್ಯೆ:ಎ3:ಸಿಓಸಿ:ವಿವ-1:2002-03 ದಿನಾಂಕ: 17ನೇ ಜನವರಿ 2005**

**ಫಿರ್ಯಾದುದಾರರು :** ವಲಯ ಅರಣ್ಯ ಅಧಿಕಾರಿ, ಅಂಕೋಲಾ.

**ವಿರುದ್ಧ**

**ಅರ್ಜಿದಾರರು :** ಮಂಜುನಾಥ ದೇವಣ್ಣ ನಾಯಕ, ಸಾ: ವಂದಿಗೆ ತಾ: ಅಂಕೋಲಾ

**ಪ್ರಸ್ತಾವನೆ:**

1. ವಲಯ ಅರಣ್ಯಾಧಿಕಾರಿ, ಅಂಕೋಲಾ ಇವರು ಈ ಪ್ರಾಧಿಕಾರಕ್ಕೆ ದಿನಾಂಕ: 7.04.2002 ರಂದು ವರದಿ ಸಲ್ಲಿಸುತ್ತಾ, ಅಂಕೋಲಾ ತಾಲ್ಲೂಕಿನ ಬೋಳೆ ಗ್ರಾಮದ ಬಳಿ ರಾಷ್ಟ್ರೀಯ ಹೆದ್ದಾರಿ 17ರ ಮೇಲೆ ದಿನಾಂಕ: 7.4.2002 ರಂದು ಅನಧಿಕೃತವಾಗಿ ಯಾವುದೇ ಪಾಸ ಯಾ ಪರ್ಮಿಟ್ ಇಲ್ಲದೇ ಸೀಸಂ(ಬೀಟೆ) ಕಟ್ಟಿಗೆಯ 10 (ಹತ್ತು) ತುಂಡುಗಳನ್ನು 0.123 ಘ.ಮೀ. ಗೂಡ್ಸ್ ರಿಕ್ಷಾ ನಂ. ಕೆಎ-30:3740 ರಲ್ಲಿ ಸಾಗಿಸುತ್ತಿದ್ದಾಗ ಇಲಾಖಾ ಸಿಬ್ಬಂದಿಗಳು ವಾಹನವನ್ನು ಜಪ್ತಿ ಮಾಡಿ ಶಾಖಾ ವನಪಾಲಕ, ಅಂಕೋಲಾ ಇವರ ಪ್ರಥಮ ಮಾಹಿತಿ ವರದಿ ಸಂಖ್ಯೆ:1/2002-03 ದಿನಾಂಕ: 7.4.2002 ರನ್ವಯ ಗುನ್ಹೆ ದಾಖಲು ಮಾಡಿಕೊಂಡಿರುತ್ತಾರೆ. ಜಪ್ತಿ ಮಾಡಿದ ವಾಹನದ ಚಾಲಕ ಮಂಜುನಾಥ ದೇವಣ್ಣ ನಾಯಕ, ಸಾ: ವಂದಿಗೆ, ಅಂಕೋಲಾ

ಇವರನ್ನು ದಸ್ತಗಿರಿ ಮಾಡಿ ನ್ಯಾಯಾಂಗ ಬಂಧನಕ್ಕೆ ಒಳಪಡಿಸಿ ಜಪ್ತಿ ಮಾಡಿದ ವಾಹನ, ವಾಹನದಲ್ಲಿದ್ದ ಕಟ್ಟಿಗೆ ಇವುಗಳನ್ನು ಪಂಚನಾಮೆ, ಸೀಜರ್ ರಿಪೋರ್ಟ್ ಹಾಗೂ ಆರೋಪಿಯ ಲಿಖಿತ ಹೇಳಿಕೆಗಳೊಂದಿಗೆ ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತಾರೆ. ಸದರಿ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಖಾತ್ರಿಪಡಿಸಿ ಸದರಿ ವಾಹನ ಹಾಗೂ ಸೀಸಂ ನಗಗಳನ್ನು ಸುರಕ್ಷತೆಗಾಗಿ ಆಫೀಸ್ ಗಾರ್ಡ್, ಅಂಕೋಲಾ ಇವರ ತಾಬಾ ವಹಿಸಿ ಕೊಡಲಾಗಿದೆ.

2. ಈ ನ್ಯಾಯಾಲಯದಿಂದ ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರಿಗೆ ತಾ: 09.04.2002 ರಂದು ಪತ್ರ ಬರೆದು ಶಾಖಾ ವನಪಾಲಕ, ಅಂಕೋಲಾ ಇವರ ಪ್ರಥಮ ಮಾಹಿತಿ ವರದಿ ಸಂಖ್ಯೆ: 1/2002-03 ತಾ: 07.04.2002 ರಡಿಯಲ್ಲಿ ಅರಣ್ಯ ಅಪರಾಧದಲ್ಲಿ ಸಿಕ್ಕಿ ಹಾಕಿಕೊಂಡ ಸದರಿ ವಾಹನದ ಮಾಲೀಕರ ವಿಳಾಸದ ವಿವರಗಳನ್ನು ಒದಗಿಸುವಂತೆ ಹಾಗೂ ಸದರಿ ಪ್ರಕರಣ ನಿಖಾಲೆ ಆಗುವವರೆಗೂ ವಾಹನದ ಮಾಲೀಕತ್ವ ಬದಲಾವಣೆ ಇತ್ಯಾದಿ ಮಾಡಬಾರದಾಗಿ ನಿರ್ದೇಶಿಸಲಾಗಿದೆ. ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರು ತಮ್ಮ ಪತ್ರ ಸಂಖ್ಯೆ: ಪ್ರಾ.ಸಾ.ಅ.ಕೆಎ-30:3740:ಉಕ:02-03 ತಾ:11.4.2002 ರಡಿಯಲ್ಲಿ ವಾಹನದ ವಿವರಗಳೊಂದಿಗೆ ವಾಹನದ ಮಾಲೀಕರ ಹೆಸರು ಮತ್ತು ವಿಳಾಸಗಳನ್ನು ಸಲ್ಲಿಸಿದ್ದಾರೆ. ಅದರಂತೆ ವಾಹನದ ಮಾಲೀಕರಾದ ಶ್ರೀ ಮಂಜುನಾಥ ದೇವಣ್ಣಾ ನಾಯಕ, ಸಾ: ವಂದಿಗೆ, ತಾ: ಅಂಕೋಲಾ ಇವರಿಗೆ ಈ ನ್ಯಾಯಾಲಯದಿಂದ ತಾ: 16.5.2002 ರಂದು ಕರ್ನಾಟಕ ಅರಣ್ಯ ಕಾಯ್ದೆ 1963 ರ ಕಲಂ 71ಎ ರಡಿಯಲ್ಲಿ ನೋಟಿಸು ಹೊರಡಿಸಿ ಸದರಿ ವಾಹನ ಗೂಡ್ಸ್ ರಿಕ್ಷಾ ನಂ. ಕೆಎ-30:3740 ಇದು ಅರಣ್ಯ ಉತ್ಪನ್ನದ (ಸೀಸಂ ತುಂಡು) ಕಳ್ಳ ಸಾಗಾಣಿಕೆ ಮಾಡುವಾಗ ಸಿಕ್ಕಿಬಿದ್ದಿದ್ದು ಕರ್ನಾಟಕ ಅರಣ್ಯ ಕಾಯ್ದೆ 1963ರ ಕಲಂ ನಂ. 71ಎ ರಡಿಯಲ್ಲಿ ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆನ್ನುವ ಬಗ್ಗೆ ಸೂಕ್ತ ಸಮಜಾಯಿಷಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಲು ಸೂಚಿಸಲಾಗಿತ್ತು. ಪುನಃ ಇನ್ನೊಂದು ನೋಟಿಸನ್ನು ತಾ: 3.6.2002 ರಂದು ಹೊರಡಿಸಿ ವಲಯ ಅರಣ್ಯ ಅಧಿಕಾರಿ, ಅಂಕೋಲಾರವರ ಮೂಲಕ ಜಾರಿ ಮಾಡಿ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆನ್ನುವ ಬಗ್ಗೆ ಸಮಜಾಯಿಷಿ ಕೇಳಲಾಗಿತ್ತು.

3. ಸದರಿ ನೋಟೀಸುಗಳಿಗೆ ಪ್ರತಿಕ್ರಿಯಿಸುತ್ತಾ ಆರೋಪಿತ ಶ್ರೀ ಮಂಜುನಾಥ ದೇವಣ್ಣಾ ನಾಯಕ ಸಾ: ವಂದಿಗೆ, ತಾ: ಅಂಕೋಲಾ ಇವರು ಈ ನ್ಯಾಯಾಲಯಕ್ಕೆ ತಾ: 11.6.2002 ರಂದು ತಾವು ಸ್ವಂತ ಹಾಗೂ ಇನ್ನೊಂದು ಮನವಿಯನ್ನು ತಮ್ಮ ನ್ಯಾಯವಾದಿಗಳ ಮುಖಾಂತರ ಸಲ್ಲಿಸುತ್ತಾ, ತಮ್ಮ ಮೇಲಿನ ಆಪಾದನೆಗಳನ್ನು ತಳ್ಳಿ ಹಾಕಿ ತಾನು ಅರಣ್ಯ ಸಿಬ್ಬಂದಿಯವರು ಆಪಾದಿಸಿದಂತೆ ಯಾವುದೇ ರೀತಿಯ ಅರಣ್ಯ ಕಳ್ಳತನದ ಅಪರಾಧದಲ್ಲಿ ಭಾಗಿಯಾಗದೇ ಇದ್ದು, ತನ್ನ ವಾಹನ ಗೂಡ್ಸ್ ರಿಕ್ಷಾವನ್ನು ಸಹಿತ ಯಾವುದೇ ರೀತಿಯ ಪ್ರತಿಬಂಧಿತ ಅರಣ್ಯ ಉತ್ಪಾದನೆಯ ಕಳ್ಳ ಸಾಗಾಟಕ್ಕೆ ಉಪಯೋಗಿಸಿದ್ದು, ಇರುವುದಿಲ್ಲ. ತಾನು ಒಬ್ಬ ಕಾನೂನು ಪರಿಪಾಲಕ ಪ್ರಜೆಯಾಗಿದ್ದು, ಅರಣ್ಯ ಇಲಾಖೆಯವರು ನನ್ನ ಮೇಲೆ ಸುಳ್ಳು ಆಪಾದನೆಗಳನ್ನು ಹೊರಿಸಿ ಮೊಕದ್ದಮೆ ದಾಖಲಿಸಿದ್ದಾರೆ. ಆದ್ದರಿಂದ ತನ್ನ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳದೇ ಬಿಟ್ಟು ಕೊಡಬೇಕಾಗಿ ಕೇಳಿಕೊಂಡಿದ್ದಾರೆ. ಅವರ ನ್ಯಾಯವಾದಿಗಳು ಸಹಿತ ಅದೇ ತಾರೀಖಿನಂದು ಅರ್ಜಿದಾರರ ಪರ ಸಲ್ಲಿಸಿದ ಮನವಿಯಲ್ಲಿಯೂ ಕೂಡ ಮೇಲಿನ ಅಂಶಗಳನ್ನು ಪುನರುಚ್ಚರಿಸುತ್ತಾ ತನ್ನ ಪಕ್ಷಗಾರರು ಅರಣ್ಯ ಸಿಬ್ಬಂದಿಯು ಆಪಾದಿಸಿದಂತೆ ಸೀಸಂ ನಾಟುಗಳ ಅನಧಿಕೃತ ಕಳ್ಳ ಸಾಗಾಣಿಕೆಯ ಅಪರಾಧ ಮಾಡಿದ್ದು ಇರುವುದಿಲ್ಲ. ಹಾಗೂ ಪ್ರಸ್ತುತ ಪ್ರಕರಣದಲ್ಲಿ ಜಪ್ತಿ ಮಾಡಲಾದ ಸದರಿ ವಾಹನವನ್ನು ಯಾವುದೇ ಅರಣ್ಯ ಅಪರಾಧಕ್ಕೆ ಉಪಯೋಗಿಸಿದ್ದು ಇರುವುದಿಲ್ಲ. ತನ್ನ ಕಕ್ಷಿಗಾರನು ಸಂಭಾವಿತನಿದ್ದು, ಸದರಿಯವರು ಒಂದು ಒಳ್ಳೆಯ ಕುಟುಂಬಕ್ಕೆ ಸೇರಿದವನಾಗಿರುತ್ತಾನೆ. ಅವನ ಮೇಲೆ ಉದ್ದೇಶಪೂರ್ವಕವಾಗಿ ಸುಳ್ಳು ಆರೋಪಗಳನ್ನು ಮಾಡಲಾಗಿದೆ. ಕುಟುಂಬದಲ್ಲಿ ತನ್ನ ಕಕ್ಷಿಗಾರನೇ ದುಡಿಯುವವನಿದ್ದು, ಇವನ ದುಡಿಮೆಯಿಂದಲೇ ಕುಟುಂಬ ನಿರ್ವಹಣೆ ಆಗುತ್ತದೆ. ಇವನಿಗೆ ಯಾವುದೇ ನೌಕರಿ ಉದ್ಯೋಗ ಇಲ್ಲವಾದ್ದರಿಂದ ಸಾಲ ಮಾಡಿ ಸದರಿ ವಾಹನವನ್ನು ಖರೀದಿಸಿದ್ದು, ಅದರ ದುಡಿಮೆಯಿಂದಲೇ ತಮ್ಮ ಉಪಜೀವನ ಮಾಡುತ್ತಿದ್ದಾರೆ. ಒಂದು ವೇಳೆ ವಾಹನವನ್ನು ಅವನಿಗೆ ಬಿಟ್ಟು ಕೊಡದೇ ಹೋದಲ್ಲಿ ಅವನಿಗೆ ತುಂಬಾ ಅನ್ಯಾಯ ಹಾಗೂ ಅನಾನುಕೂಲ ಮಾಡಿದಂತಾಗುತ್ತದೆ. ಅದೂ ಅಲ್ಲದೇ ತನ್ನ ಕಕ್ಷಿಗಾರನು ಇಲಾಖೆಯು ಆದೇಶಿಸಿದಾಗ ವಾಹನವನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಲು ಬದ್ಧನಿರುವುದಾಗಿ ಹೇಳುತ್ತಾರೆ.

ಮುಂದುವರಿಯುತ್ತಾ ಆಪಾದಿತರ ನ್ಯಾಯವಾದಿಗಳು, ಅರಣ್ಯ ಇಲಾಖೆಯ ಸಿಬ್ಬಂದಿ ಜನರು ಪ್ರಸ್ತುತ ಪ್ರಕರಣದಲ್ಲಿ ವಾಹನದ ವಿರುದ್ಧ ಕಾನೂನು ಕ್ರಮ ಜರುಗಿಸಬೇಕಾದಲ್ಲಿ ಕಡ್ಡಾಯವಾಗಿ ಪಾಲಿಸಬೇಕಾದ ಅವಶ್ಯಕತೆಗಳನ್ನು ಸಹಿತ ಪಾಲಿಸದೇ ವಾಹನದ ವಿರುದ್ಧ ಸುಳ್ಳು ಆಪಾದನೆಗಳನ್ನು ಹೊರಿಸಿದ್ದಾಗಿ ಹೇಳುತ್ತಾ, ಸದರಿ ವಾಹನವನ್ನು ಅರ್ಜಿದಾರ ಮಧ್ಯಂತರ ತಾಬಾಕ್ಕೆ ಬಿಟ್ಟುಕೊಡಲು ಕೋರಿದ್ದಾರೆ. ಆದರೆ ಸದರಿ ವಾಹನವು ಅರಣ್ಯ ಉತ್ಪನ್ನಗಳಾದ ಸೀಸಂ ನಗಗಳನ್ನು ಕಳ್ಳಸಾಗಾಣಿಕೆ ಮಾಡುವಾಗ ಸಿಕ್ಕಿಬಿದ್ದಿದರ ವಿರುದ್ಧ ಕಾನೂನು ಕ್ರಮ ಜರುಗಿಸುವಾಗ ಇಲಾಖೆಯು ಪಾಲಿಸದೇ ಇರುವ ಕಡ್ಡಾಯವಾದ ಅವಶ್ಯಕತೆಗಳು ಯಾವುವು ಎನ್ನುವ ಬಗ್ಗೆ ಏನು ಹೇಳಲಿಲ್ಲವೆಂಬ ಅಂಶವನ್ನು ಗಮನಿಸಲಾಗಿದೆ.

4. ಈ ಸಂಬಂಧವಾಗಿ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರ ಅಭಿಪ್ರಾಯ ಕೇಳಲಾಗಿದೆ. ಅವರು ತಮ್ಮ ವರದಿ ದಿನಾಂಕ: 26.7.2002 ರಲ್ಲಿ ಅಭಿಪ್ರಾಯವನ್ನು ಸಲ್ಲಿಸುತ್ತಾ, ಆಪಾದಿತರು ಕರ್ನಾಟಕ ಅರಣ್ಯ ಕಾಯ್ದೆ ಕಲಂ 24,62,80 71ಎ, 104ಡಿ ಹಾಗೂ 127ಎ ರಡಿಯಲ್ಲಿ ಅಪರಾಧ ಮಾಡಿ ಕಳ್ಳ ಸಾಗಾಣಿಕೆಗೆ ಉಪಯೋಗಿಸಲಾದ ವಾಹನದೊಂದಿಗೆ ಕಳ್ಳಸಾಗಾಣಿಕೆ ಮಾಡಲಾದ ಅರಣ್ಯ ಉತ್ಪನ್ನ ಸಹಿತ ಸಿಕ್ಕಿಬಿದ್ದಿದ್ದು ಇರುತ್ತದೆ. ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ ವಾಹನವನ್ನು ಸ್ವತಃ ವಾಹನದ ಮಾಲೀಕನೇ ನಡೆಸುತ್ತಾ ಕಳ್ಳ ಸಾಗಾಣಿಕೆ ಮಾಡುತ್ತಿದ್ದು, ಅರಣ್ಯ ಕಾಯ್ದೆ ಅಡಿಯಲ್ಲಿ ಅಪರಾಧ ಮಾಡಿದ್ದಾರೆ. ಅರ್ಜಿದಾರನು ಅರಣ್ಯ ಕಾಯ್ದೆಯಡಿಯಲ್ಲಿ ಅಪರಾಧವೆಸಗಿರುವುದಕ್ಕೆ ಸಾಕ್ಷಿ ಪುರಾವೆಗಳಿದ್ದು, ಅವನು ಮೇಲ್ನೋಟಕ್ಕೆ ಅಪರಾಧ ಮಾಡಿದ್ದು ಕಂಡು ಬರುತ್ತದೆ. ಹಾಗೂ ಸದರಿ ಅರ್ಜಿದಾರ ಸಲ್ಲಿಸಿದ ಅರ್ಜಿಯಲ್ಲಿ ನಮೂದಿಸಿದ ಯಾವುದೇ ಕಾರಣಗಳು ವಾಹನವನ್ನು ಮಧ್ಯಂತರ ತಾಬಾ ಬಿಡುಗಡೆಗೊಳಿಸಬೇಕೆಂಬುದಕ್ಕೆ ಸೂಕ್ತ ಕಾರಣಗಳಾಗಿ ಕಂಡು ಬರದೇ ಇರುವುದರಿಂದ ಸದರಿ ವಾಹನವನ್ನು ಬಿಡುಗಡೆ ಮಾಡಲು ಕಾನೂನಿನಲ್ಲಿ ಅವಕಾಶ ಇರುವುದಿಲ್ಲ. ಅರಣ್ಯ ಅಪರಾಧದಲ್ಲಿ ಉಪಯೋಗಿಸಿದ ವಾಹನವನ್ನು ಬಿಡುಗಡೆ ಮಾಡಿದಲ್ಲಿ ಪುನಃ ಸದರ ವಾಹನವನ್ನು ಅರಣ್ಯ ಅಪರಾಧ ಮಾಡುವುದಕ್ಕೆ ಉಪಯೋಗಿಸುವುದರಿಂದ ಇಂತಹ ವಾಹನಗಳನ್ನು ಬಿಡಬಾರದೆಂಬ ಮಾನ್ಯ ಸರ್ವೋಚ್ಚ ನ್ಯಾಯಾಲಯದ ಕ್ರಿ.ಅ.ನಂ.668/2000 ರಲ್ಲಿಯ ಅಭಿಪ್ರಾಯವನ್ನು ಉಲ್ಲೇಖಿಸುತ್ತಾ ಅರ್ಜಿದಾರರ ಮನವಿಯನ್ನು ತಿರಸ್ಕರಿಸಿ ಸದರ ವಾಹನ ಬಿಡುಗಡೆ ಮಾಡಬಾರದಾಗಿ ತಕರಾರು ಸಲ್ಲಿಸಿದ್ದಾರೆ. ಅವರ ವಿನಂತಿ ಅರ್ಜಿ ಹಾಗೂ ತಕರಾರು ಅರ್ಜಿ ಎರಡೂ ಲಿಖಿತ ರೂಪದಲ್ಲಿದ್ದರಿಂದ ಅವುಗಳನ್ನು ಕಂಡಿಕೆವಾರು ಪರಿಶೀಲಿಸಿದ ನಂತರ ಈ ನ್ಯಾಯಾಲಯದ ತಾ: 13.9.2002 ರ ಆದೇಶದಲ್ಲಿ ವಿವರಿಸಿದ ಕಾರಣಗಳಿಗೋಸ್ಕರ ಅರ್ಜಿದಾರರ ಮನವಿಯನ್ನು ತಳ್ಳಿ ಹಾಕಲಾಗಿದೆ. ಹಾಗೂ ಪ್ರಕರಣದ ವಿಚಾರಣೆಯನ್ನು ಮುಂದುವರಿಸಲಾಯಿತು.

5. ಈ ನ್ಯಾಯಾಲಯದ ತಾ: 13.09.2002ರ ಆದೇಶದ ವಿರುದ್ಧ ಆಪಾದಿತ ಶ್ರೀ ಮಂಜುನಾಥ ದೇವಣ್ಣ ನಾಯಕ, ಸಾ: ವಂದಿಗೆ, ತಾ: ಅಂಕೋಲಾ ಇವರು ಮಾನ್ಯ ಸೇಶನ್ ಕೋರ್ಟ್, ಕಾರವಾರದಲ್ಲಿ ಕರ್ನಾಟಕ ಅರಣ್ಯ ಕಾಯ್ದೆ 1963 ಕಲಂ 71 ರನ್ವಯ ಕ್ರಿಮಿನಲ್ ಅಪೀಲ್ ನಂ. 83/02 ರಡಿಯಲ್ಲಿ ಮನವಿ ಸಲ್ಲಿಸಿ, ತಾವು ಸೀಸಂ ತುಂಡುಗಳನ್ನು ತನ್ನ ಗೂಡ್ಸ್ ರಿಕ್ಷಾದಲ್ಲಿ ಕಳ್ಳ ಸಾಗಾಣಿಕ ಮಾಡಿದ್ದನ್ನು ಅಲ್ಲಗಳೆಯುತ್ತಾ ತನ್ನ ಮೇಲೆ ಸುಳ್ಳು ಆಪಾದನೆ ಹೊರಿಸಿ ತನ್ನ ಗೂಡ್ಸ್ ರಿಕ್ಷಾವನ್ನು ಕಾನೂನು ಬಾಹೀರವಾಗಿ ಅರಣ್ಯ ಸಿಬ್ಬಂದಿ ಜನರಿಂದ ಜಪ್ತಿ ಮಾಡಲಾಗಿದೆ. ಸದರ ವಾಹನವನ್ನು

ತೆರೆದ ಬಿಸಿಲು ಮಳೆಗಾಳಿಗೆ ಇಟ್ಟಿರುವುದರಿಂದ ಅದು ತನ್ನ ಮೌಲ್ಯವನ್ನು ಕಳೆದುಕೊಳ್ಳುತ್ತದೆ. ತನ್ನ ಕುಟುಂಬವು ಸದರ ರಿಕ್ಷಾ ಚಾಲನೆಯಿಂದಲೇ ಉಪ ಜೀವನ ಸಾಗಿಸುತ್ತಿದ್ದು, ಸದರ ಗೂಡ್ಸ್ ರಿಕ್ಷಾವನ್ನು ಸಾಲ ಮಾಡಿ ಖರೀದಿಸಿದ್ದು, ಸದರ ವಾಹನವನ್ನು ಮಧ್ಯಂತರ ತಾಬಾಕ್ಕೆ ಬಿಟ್ಟು ಕೊಡದೇ ಹೋದಲ್ಲಿ ತನಗೆ ತುಂಬಲಾರದ ಹಾನಿ ಆಗುತ್ತದೆ. ಸದರ ಆಪಾದಿತ ಅರ್ಜಿದಾರನು ಪ್ರಾಧಿಕಾರವು ವಿಧಿಸುವ ಷರತ್ತುಗಳಿಗೆ ಬದ್ಧನಾಗುವುದಾಗಿ ಹೇಳುತ್ತಾ ಸದರ ವಾಹನವನ್ನು ಮಧ್ಯಂತರ ತಾಬಾಕ್ಕೆ ಬಿಟ್ಟು ಕೊಡಬೇಕೆಂದು ಮನವಿ ಮಾಡಿಕೊಂಡಿದ್ದರು.

ಸದರ ಅಪೀಲನ್ನು ವಿರೋಧಿಸಿದ ಸರ್ಕಾರಿ ಅಭಿಯೋಜಕರು ಸದರ ಗೂಡ್ಸ್ ರಿಕ್ಷಾವನ್ನು ಅಪರಾಧವೆಸಗುತ್ತಿರುವಾಗಲೇ (ರೆಡ್ ಹ್ಯಾಂಡ್) ಜಪ್ತಿ ಮಾಡಿದ್ದು ಸ್ವತಃ ವಾಹನ ಮಾಲೀಕರಾದ ಅರ್ಜಿದಾರನೇ ರಿಕ್ಷಾದಲ್ಲಿದ್ದುಕೊಂಡು ಅಪರಾಧ ಮಾಡುವಾಗ ಸಿಕ್ಕಿ ಹಾಕಿಕೊಂಡಿರುತ್ತಾರೆ. ಸದರ ಪ್ರಕರಣದಲ್ಲಿ ಗುನ್ಹೆಯು ಮೇಲ್ನೋಟಕ್ಕೆ ಕಂಡುಬರುವಂತಿದ್ದುದರಿಂದ ಇದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕಾದದ್ದು ಯೋಗ್ಯವಾಗಿದೆ. ಒಂದು ವೇಳೆ ಸದರ ವಾಹನವನ್ನು ಮಧ್ಯಂತರ ತಾಬಾದಲ್ಲಿ ಬಿಟ್ಟುಕೊಟ್ಟಲ್ಲಿ ಆಪಾದಿತರು ಅಪರಾಧದ ಪುನರಾವರ್ತನೆ ಮಾಡುವುದರಿಂದ ಅರ್ಜಿದಾರರ ಅಪೀಲನ್ನು ತಳ್ಳಿ ಹಾಕುವಂತೆ ವಿನಂತಿಸಿದ್ದಾರೆ.

ಆಪಾದಿತರ ಪರ ನ್ಯಾಯವಾದಿಗಳು ತಮ್ಮ ವಾದವನ್ನು ಮುಂದುವರಿಸುತ್ತಾ, ಅಧಿಕಾರಿಯುತ ಅಧಿಕಾರಿಗಳು ಪ್ರಸ್ತುತ ಪ್ರಕರಣದಲ್ಲಿ ಆಪಾದಿತರ ಮೇಲಿನ ವರದಿಯನ್ನೇ ಮೇಲ್ನೋಟಕ್ಕೆ ಕಂಡು ಬರುವ ಅಪರಾಧವಾಗಿ ಪರಿಗಣಿಸಿ ಕೇಸು ದಾಖಲಿಸಿದ್ದು ಇದ್ದು, ಕೇವಲ ಒಂದು ವಿಷಯವನ್ನು ವರದಿ ಮಾಡಿದ ಮಾತ್ರಕ್ಕೆ ಅದು ಮೇಲ್ನೋಟಕ್ಕೆ ಕಂಡುಬರುವ ಅಪರಾದ ಆಗಲಾರದು. ಅಪರಾದ ಕಾನೂನಿನಡಿಯಲ್ಲಿ ಮತ್ತೊಬ್ಬರ ಮೇಲೆ ಆಪಾದನೆಗಳನ್ನು ಹೊರಿಸುವವರೇ ಆ ಮತ್ತೊಬ್ಬರ ಆಪಾದನೆಗಳನ್ನು ಸಾಬೀತುಪಡಿಸಬೇಕಾಗುತ್ತದೆ. ಪ್ರಸ್ತುತ ಪ್ರಕರಣದಲ್ಲಿ ಅರಣ್ಯ ಸಿಬ್ಬಂದಿಯವರು ಅರ್ಜಿದಾರರ ಮೇಲೆ ಆಪಾದನೆಗಳನ್ನು ಹೊರಿಸಿದ್ದು, ಅವುಗಳನ್ನು ರುಜುವಾತುಪಡಿಸುವ ಜವಾಬ್ದಾರಿ ಅರಣ್ಯ ಸಿಬ್ಬಂದಿಯ ಮೇಲೆ ಇರುವುದು.

ಆಪಾದನೆಗಳು ಸಾಬೀತು ಆಗುವವರೆಗೂ ಪ್ರತಿಯೊಬ್ಬ ಪ್ರಜೆಯೂ ಸಭ್ಯ ಸಂಭಾವಿತನೆಂದೇ ಪರಿಗಣಿಸಬೇಕೆಂಬುದು ಅಪರಾದ ಕಾನೂನಿನ ಅತಿ ಮಹತ್ವದ ಮೂಲ ತತ್ವವಾಗಿದೆ. ಪ್ರಸ್ತುತ ಪ್ರಕರಣದಲ್ಲಿ ಆಪಾದಿತ ವಾಹನವು ತೆರೆದ ಮಳೆಗಾಳಿ ಬಿಸಿಲಿನಲ್ಲಿ ಇಟ್ಟಿರುವುದರಿಂದ ಅದು ಹಾಳಾಗುವುದಲ್ಲದೇ ಅದರ ಬೆಲೆಯು ಕಡಿಮೆ ಆಗುತ್ತದೆ. ಸದರ ವಾಹನವು ಒಂದು ವರ್ಷದಲ್ಲಿ ಹೀಗೆ ಉಪಯೋಗಿಸದೇ ಇಟ್ಟಿದ್ದು ಈ ಕುರಿತು ನಡೆಸಬಹುದಾದ ವಿಚಾರಣೆಯಲ್ಲಿ ಅಪಾದಿತರರ ಮೇಲಿನ ಆರೋಪಗಳು ಸಾಬೀತಾಗದೇ ಹೋದಲ್ಲಿ ಸದರ ವಾಹನವನ್ನು ಅದರ ನಿಜ ವಾರಸುದಾರರಿಗೆ ಬಿಟ್ಟು ಕೊಡಬೇಕಾಗುತ್ತದೆ. ಆದರೆ ಅಲ್ಲಿಯವರೆಗೂ ಸದರ ವಾಹನವು ತೆರೆದ ಬಿಸಿಲು ಮಳೆಗಾಳಿಯಿಂದಾಗಿ ಸಾಕಷ್ಟು ಹಾಳಾಗಬಹುದಾಗಿದೆ. ಒಂದು ವೇಳೆ ಅದನ್ನು ಮುಟ್ಟುಗೋಲು ಹಾಕಿಕೊಳ್ಳಲು ಆದೇಶವಾದಲ್ಲಿ ಸದರ ವಾಹನವನ್ನು ತತ್ಸಂಬಂಧ ಹಾಜರುಪಡಿಸುವಂತೆ ಅರ್ಜಿದಾರರಿಗೆ ನಿರ್ದೇಶಿಸಬಹುದಾಗಿದೆ. ಕೆಲವೊಂದು ವಿಶೇಷ ಪ್ರಕರಣಗಳಲ್ಲಿ ಬ್ಯಾಂಕ್ ಗ್ಯಾರಂಟಿ ಇತ್ಯಾದಿ ಪಡೆದುಕೊಂಡು ವಾಹನವನ್ನು ಮಧ್ಯಂತರ ತಾಬಾಕ್ಕೆ ಬಿಡಬಹುದಾಗಿದ್ದು ಪ್ರಸ್ತುತ ಪ್ರಕರಣದಲ್ಲಿ ಸದರ ವಾಹನವು ಮಳೆಗಾಳಿ ಬಿಸಿಲಿಗೆ ಹಾಳಾಗಬಹುದಾದ್ದರಿಂದ ಇದನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಮಾನ್ಯ ಸೆಷನ್ ನ್ಯಾಯಾಲಯವು ವಾಹನವನ್ನು ಕೆಲವೊಂದು ಷರತ್ತುಗಳನ್ನು ವಿಧಿಸಿ ವಾಹನವನ್ನು ಕ್ರಿ.ಅ.ನಂ.83/02 ನೇದ್ದರ ದಿನಾಂಕ: 7.6.2003 ರ ಆದೇಶದಲ್ಲಿ ಮಧ್ಯಂತರ ತಾಬಾಕ್ಕೆ ಬಿಟ್ಟುಕೊಡಲು ಆದೇಶಿಸಲಾಗಿದೆ.

ಸದರ ವಾಹನವನ್ನು ಮಧ್ಯಂತರ ತಾಬಾಕ್ಕೆ ಬಿಟ್ಟುಕೊಡುವಾಗ ಮಾನ್ಯ ಸೆಷನ್ ನ್ಯಾಯಾಲಯವು ಪರಿಗಣಿಸಲಾದ ಕಾರಣಗಳೆಂದರೆ, ಸದರ ವಾಹನ ಮಳೆ, ಗಾಳಿ, ಬಿಸಿಲಿಗೆ ಹಾಳಾಗುವುದೆಂಬ ಕಾರಣದಿಂದ ಇದನ್ನು ವಿಶೇಷ ಪ್ರಕರಣವೆಂದು ಪರಿಗಣಿಸಲಾಗಿದೆ. ಹಾಗೂ ಪ್ರಕರಣದ ವಿಚಾರಣೆಯಲ್ಲಿ ತೀರ್ಪು ಅರ್ಜಿದಾರರ ಪರವಾದ ಸಂದರ್ಭದಲ್ಲಿ ವಾಹನವನ್ನು ಬಿಟ್ಟುಕೊಡಲೇ ಬೇಕಾಗಬಹುದು. ಅಂದರೆ ಅಧಿಕೃತ ಅಧಿಕಾರಿಗಳ ಅಂತಿಮ ಆದೇಶಕ್ಕೆ ಒಳಪಟ್ಟು ಈ ವಾಹನವನ್ನು ಮಧ್ಯಂತರ ತಾಬಾಕ್ಕೆ ಬಿಡಲಾಗಿದೆ ಎಂದು ವ್ಯಾಖ್ಯಾನಿಸಲಾಗಿದೆ.

6. ಈ ನ್ಯಾಯಾಲಯದಲ್ಲಿ ವಿಚಾರಣೆಯನ್ನು ಮುಂದುವರಿಸಲಾಯಿತು. ಪ್ರಸ್ತುತ ಪ್ರಕರಣದಲ್ಲಿ ಈ ನ್ಯಾಯಾಲಯವು ತಾ: 7.4.2002 ರಿಂದ ವಿಚಾರಣೆಯನ್ನು ಪ್ರಾರಂಭಿಸಿ ತಾ: 9.8.2004ರ ವರೆಗೆ ನಡೆದಿದ್ದರೂ ಕೂಡ ಬಹಳಷ್ಟು ವಿಚಾರಣೆಗಳಿಗೆ ಆಪಾದಿತನಾಗಲೀ ಅವರ ಪರವಾಗಿ ಅವರ ನ್ಯಾಯವಾದಿಗಳಾಗಲೀ ಹಾಜರಾಗದೇ ಇರುವುದು ಕಂಡು ಬರುತ್ತದೆ. ಅವರಿಗೆ ಸಾಕಷ್ಟು ನೋಟಿಸುಗಳನ್ನು ನೀಡಿದಾಗ್ಯೂ ಕೂಡ ಅವರಾಗಲೀ ಅವರ ನ್ಯಾಯವಾದಿಗಳಾಗಲೀ ವಿಚಾರಣೆ ಕಾಲಕ್ಕೆ ಹಾಜರಾಗದೇ ಇದ್ದುದರಿಂದ ವಿಚಾರಣೆಗೆ ಹಾಜರಾದ ಫಿರ್ಯಾದಿದಾರರು ಪಂಚ ಜನರ ವಿಚಾರಣೆಗಳನ್ನು ಮುಂದುವರೆಸಲಾಯಿತು.

**ಸರ್ಕಾರದ ಪರವಾಗಿ ಸಾಕ್ಷಿಗಳು:**

1) ಶ್ರೀ ಎಸ್. ಪಿ. ಮಹಾದೇವ ವಲಯ ಅರಣ್ಯ ಅಧಿಕಾರಿ, ಅಂಕೋಲಾ (ಪಿ.ಡಬ್ಲ್ಯೂ-1)
2) ಶ್ರೀ ರಮೇಶ ಐ. ನಾಯ್ಕ, ಅರಣ್ಯರಕ್ಷಕ, (ಪಿ.ಡಬ್ಲ್ಯೂ-2)
3) ಶ್ರೀ ವಿ. ಎಂ. ನಾಯ್ಕ, ನಿವೃತ್ತ ವನಪಾಲಕ, (ಪಿ.ಡಬ್ಲ್ಯೂ-3)

**ಪ್ರತಿ ವಾದಿಗಳ ಪರವಾಗಿ**

1) ಶ್ರೀ ಮಂಜುನಾಥ ದೇವಣ್ಣಾನಾಯ್ಕ ವಾಹನದ ಮಾಲೀಕ ಹಾಗೂ ಪ್ರಕರಣದ ಆರೋಪಿ
2) ಶ್ರೀ ಎನ್. ವಿ. ನಾಯಕ, ಆರೋಪಿ ಪರ ವಕಲಾತ್ತು ವಹಿಸಿದ ನ್ಯಾಯವಾದಿಗಳು

ಈ ಮೇಲ್ಕಾಣಿಸಿದಂತೆ ಸರ್ಕಾರದ ಪರ ಸಾಕ್ಷಿಗಳ ಹೇಳಿಕೆಯನ್ನು ಅವಲೋಕಿಸಲಾಗಿದೆ. ಹಾಗೂ ಪ್ರತಿವಾದಿಗಳ ಪರ ಸಾಕ್ಷಿಯನ್ನು ಅವಲೋಕಿಸಲು ಅವರು ವಿಚಾರಣೆಗೆ ಹಾಜರಾಗದೇ ಇದ್ದುದರಿಂದ ಅವರು ದಿನಾಂಕ: 11.6.2002 ರಂದು ಈ ನ್ಯಾಯಾಲಯದೆದುರು ಸಲ್ಲಿಸಿದ ಅರ್ಜಿಯನ್ನು ಪ್ರತಿವಾದಿಗಳ ಹೇಳಿಕೆಯನ್ನಾಗಿ ಪರಿಗಣಿಸಿ ಹಾಗೂ ಆಪಾದಿತರ ಪರವಾಗಿ ಇವರ ನ್ಯಾಯವಾದಿಗಳೂ ಸಹಿತ ಈ ನ್ಯಾಯಾಲಯದಲ್ಲಿ ವಿಚಾರಣೆ ಕಾಲಕ್ಕೆ ಹಾಜರಾಗದೇ ಇದ್ದುದರಿಂದ ಈ ಮೊದಲು ಇವರು ತಮ್ಮ ಕಕ್ಷಿದಾರನ ಪರವಾಗಿ ದಿನಾಂಕ: 11.6.2002 ರಂದು ಸಲ್ಲಿಸಿದ ಮನವಿಯನ್ನು ಸಹ ಪ್ರತಿವಾದಿಗಳ ಪರ ಹೇಳಿಕೆಯನ್ನಾಗಿ ಪರಿಗಣಿಸಲಾಗಿದೆ.

ಈ ಎಲ್ಲಾ ಲಿಖಿತ ದಾಖಲೆಗಳು, ಹೇಳಿಕೆಗಳನ್ನು, ವಾದ ವಿವಾದಗಳನ್ನು ಆಲಿಸಿ, ಪರಿಶೀಲಿಸಿದ ನಂತರ ಈ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸೀಸಂ ನಾಟುಗಳನ್ನು ಅಧಿಕೃತ ಪಾಸ ಯಾ ಪರ್ಮಿಟ್ ಇಲ್ಲದೆಯೇ ಸಾಗಿಸುತ್ತಿದ್ದ ಬಗ್ಗೆ ಗುನ್ನೆ ಆಗಿದೆಯೇ?

ಆ) ಮೇಲೆ ನಮೂದಿಸಿದ ಸೀಸಂ ನಾಟುಗಳ ಕಳ್ಳ ಸಾಗಣಿ ಮಾಡುವಲ್ಲಿ ವಾಹನ ಸಂಖ್ಯೆ: ಕೆಎ-30-3740 ಎಂಬ ಗೂಡ್ಸ್ ರಿಕ್ಷಾ ಉಪಯೋಗ ಮಾಡಲಾಗಿದೆಯೇ?

ಇ) ಈ ಗುನ್ನೆಯನ್ನು ವಾಹನದ ಮಾಲೀಕ ಅಥವಾ ಅವನ ಏಜೆಂಟ್ ಅಥವಾ ಅದರ ಜವಾಬ್ದಾರಿ ಹೊಂದಿದ ವ್ಯಕ್ತಿಗಳಿಗೆ ಗೊತ್ತಿದ್ದು ಮಾಡಲಾಗಿದೆಯೇ? ಹಾಗೂ ಅವರು ಈ ಗುನ್ನೆಯಲ್ಲಿ ಶಾಮೀಲಾಗಿದ್ದಾರೆಯೇ? ಹಾಗೂ ಈ ಗೂಡ್ಸ್ ರಿಕ್ಷಾವನ್ನು ಬೀಟೆ (ಸೀಸಂ) ತುಂಡುಗಳ ಕಳ್ಳ ಸಾಗಾಣಿಕೆಗೆ ಬಳಕೆಯಾಗದಂತೆ ಗೂಡ್ಸ್ ರಿಕ್ಷಾದ ಮಾಲೀಕ ಅವರ ಏಜೆಂಟ್ ಅಥವಾ ಈ ವಾಹನದ ಜವಾಬ್ದಾರಿಯನ್ನು ಹೊಂದಿದವರು ಸಾಕಷ್ಟು ಮುಂಜಾಗ್ರತಾ ಕ್ರಮವನ್ನು ಕೈಗೊಳ್ಳಲು ವಿಫಲರಾಗಿದ್ದಾರೆಯೇ?

ಈ) ಈ ವಾಹನವನ್ನು ಅರಣ್ಯ ಕಾಯ್ದೆ 71-ಎ ಅಧಿನಿಯಮದಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) - ಹೌದು

ಅಂಶ ನಂ. (ಆ) - ಹೌದು

ಅಂಶ ನಂ. (ಇ) - ಹೌದು

ಅಂಶ ನಂ. (ಈ) - ಹೌದು

**ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.**

**ಅಂಶ ನಂ. (ಅ)**

ಶಾಖಾ ವನಪಾಲಕ, ಅಂಕೋಲಾ ರವರ ಪ್ರಥಮ ಮಾಹಿತಿ ಸಂಖ್ಯೆ: 1/02-03 ದಿನಾಂಕ: 7.4.2002 ರನ್ವಯ ಅರಣ್ಯ ಅಪರಾಧದಲ್ಲಿ ಸಿಕ್ಕಿ ಹಾಕಿಕೊಂಡ ಮುದ್ದೆ ಮಾಲು.

1) ಗೂಡ್ಸ್ ರಿಕ್ಷಾ ನಂ. ಕೆಎ-30/3740
2) ಸದರ ಗೂಡ್ಸ್ ರಿಕ್ಷಾದಲ್ಲಿ ಅಧಿಕೃತ ಪಾಸ ಯಾ ಪರ್ಮಿಟ್ ಇಲ್ಲದೆಯೇ ಅಕ್ರಮವಾಗಿ ಸಾಗಿಸುತ್ತಿದ್ದ ಸೀಸಂ 10 ತುಂಡುಗಳು (0.123 ಘಮೀ). ಈ ನ್ಯಾಯಾಲಯದೆದುರು ಹಾಜರುಪಡಿಸಿದ್ದಾರೆ.
3) ಸದರ ಅರಣ್ಯ ಉತ್ಪಾದನೆಯ ಕಳ್ಳ ಸಾಗಾಣಿಕೆ ಮಾಡುವಾಗ ಮುದ್ದೆ ಮಾಲಿನೊಂದಿಗೆ ಸಿಕ್ಕಿಬಿದ್ದ ವಾಹನದ ಚಾಲಕ ಹಾಗೂ ವಾಹನದ ಮಾಲೀಕ ಇವನನ್ನು ದಸ್ತಗಿರ್ ಮಾಡಿ ನ್ಯಾಯಾಂಗ ಬಂಧನಕ್ಕೆ ಒಳಪಡಿಸಲಾಗಿದೆ.

**ಸದರಿಯವರು ಹಾಜರುಪಡಿಸಿದ.**

1) ವಲಯ ಅರಣ್ಯ ಅಧಿಕಾರಿ ಅಂಕೋಲಾರವರ ವರದಿ (ಪಿ.-1)
2) ಅಪಾದಿತನು ವಲಯ ಅರಣ್ಯ ಅಧಿಕಾರಿ, ಅಂಕೋಲಾ ಇವರ ಎದುರಿಗೆ ಲಿಖಿತವಾಗಿ ನೀಡಿದ ತಪ್ಪೊಪ್ಪಿಗೆ ಹೇಳಿಕೆ (ಪಿ-2)
3) ಪಂಚನಾಮೆ (ಪಿ-3)
4) (ಶ್ರೀ ಎಸ್. ಪಿ. ಮಹಾದೇವ, ವಲಯ ಅರಣ್ಯ ಅಧಿಕಾರಿ ಅಂಕೋಲಾ (ಪಿ.ಡಬ್ಲ್ಯೂ-1)
5) (ಶ್ರೀ ರಮೇಶ ಪಿ. ನಾಯ್ಕ, ಅರಣ್ಯರಕ್ಷಕ (ಪಿ.ಡಬ್ಲ್ಯೂ-2).
6) (ಶ್ರೀ ವಿ. ಎಂ. ನಾಯ್ಕ, ವನಪಾಲಕ, ನಿವೃತ್ತಿ (ಪಿ.ಡಬ್ಲ್ಯೂ-3).

**ಇವರು ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

ಇವುಗಳನ್ನೆಲ್ಲಾ ಪರಿಶೀಲಿಸಲಾಗಿದೆ. ಈ ಎಲ್ಲಾ ದಾಖಲೆ ಹೇಳಿಕೆಗಳನ್ವಯ ದಿನಾಂಕ: 7.4.2002 ರಂದು ಬೆಳಿಗ್ಗೆ ಸುಮಾರು 6.30ರ ಸಮಯಕ್ಕೆ ರಾಷ್ಟ್ರೀಯ ಹೆದ್ದಾರಿ-17ರ ಬೋಳೆ ಕ್ರಾಸ್ ಹತ್ತಿರ ಗೂಡ್ಸ್ ರಿಕ್ಷಾ ಸಂ: ಕೆಎ-30/3740 ರಲ್ಲಿ ಯಾವುದೇ ಅಧಿಕೃತ ಪಾಸ ಯಾ ಪರ್ಮಿಟ್ ಇಲ್ಲದೇ ಅಕ್ರಮವಾಗಿ ಸೀಸಂ (ಬೀಟೆ) ತುಂಡುಗಳು 10 ನಗ 0.123 ಘಮೀ. ಸಾಗಿಸುತ್ತಿರುವಾಗ ಶಾಖಾ ವನಪಾಲಕ, ಅಂಕೋಲಾ ಇವರು ಪ್ರಥಮ ಮಾಹಿತಿ ಸಂಖ್ಯೆ: 1/02-03 ದಿನಾಂಕ: 7.4.2002 ರನ್ವಯ ಸ್ವತಃ ವಾಹನ ಚಾಲನೆ ಮಾಡುತ್ತಿದ್ದ ವಾಹನದ ಮಾಲೀಕನೊಂದಿಗೆ ಅಟಕಾಯಿಸಿ ಗುನ್ನೆ ದಾಖಲಿಸಿದ್ದು ಇರುತ್ತದೆ. ಸದರ ವಾಹನ ಮಾಲೀಕರಾದ ಚಾಲಕನ ಮಾಡುತ್ತಿದ್ದ ವಾಹನದ ಮಾಲೀಕನೊಂದಿಗೆ ಅಟಕಾಯಿಸಿ ಗುನ್ನೆ ದಾಖಲಿಸಿದ್ದು ಇರುತ್ತದೆ. ಸದರ ವಾಹನ ಮಾಲೀಕರಾದ ಚಾಲಕನ ಹತ್ತಿರ ಸದರ ವಾಹನದಲ್ಲಿ ಕಂಡು ಬಂದ ಸೀಸಂ ಕಟ್ಟಿಗೆ ತುಂಡುಗಳಿಗೆ ಸಂಬಂಧಿಸಿದಂತೆ ಯಾವುದೇ ಪಾಸ ಯಾ ಪರ್ಮಿಟ್ ಇಲ್ಲದೇ ಅಧಿಕೃತ ದಾಖಲೆಗಳನ್ನು ಕೇಳಿದಾಗ ಇಲ್ಲಾ ಅಂತ ಹೇಳಿ ಯಾವುದೇ ಅಧಿಕೃತ ದಾಖಲೆ ಪಾಸ ಯಾ ಪರ್ಮಿಟ್ ತೋರಿಸುವಲ್ಲಿ ವಿಫಲನಾಗಿದ್ದಾನೆ. ಸದರ ಸೀಸಂ ತುಂಡುಗಳನ್ನು ಪರಿಶೀಲಿಸಲಾಗಿ ಅವುಗಳಿಗೆ ಇಲಾಖೆಯ ಯಾವುದೇ ಛಪ್ಪಾ, ಗುರುತು ವಗ್ಗೆರೆ ಕಂಡು ಬರದೇ ಇದ್ದುದರಿಂದ ಇದು ಅನಧಿಕೃತವಾಗಿ ಕಳ್ಳತನದಿಂದ ಕದ್ದ ಮಾಲು ಎಂದು ದೃಢಪಡುತ್ತದೆ. ಯಾವುದೇ ಅರಣ್ಯ ಉತ್ಪನ್ನಗಳನ್ನು ಅಧಿಕೃತ ಪಾಸ ಯಾ ಪರ್ಮಿಟ್ ಅಥವಾ ಅದಕ್ಕೆ ಸಂಬಂಧಿಸಿದಂತೆ ಅಧಿಕೃತ ದಾಖಲೆಗಳಿಲ್ಲದೆಯೇ ಸಾಗಿಸುವುದು ಕಾನೂನಿನಡಿಯಲ್ಲಿ ಅಪರಾಧವಾಗುತ್ತದೆ. ಈ ಬಗ್ಗೆ ಪ್ರಥಮ ಮಾಹಿತಿ ಸಂಖ್ಯೆ ಪಂಚನಾಮೆ, ಸಾಕ್ಷಿದಾರರ ಹೇಳಿಕೆಗಳು, ಆಪಾದಿತರು ನೀಡಿರುವ ತಪ್ಪೊಪ್ಪಿಗೆ ಹೇಳಿಕೆ ಇವೆಲ್ಲವುಗಳನ್ನು ಗಮನಿಸಿ, ಪರಿಶೀಲಿಸಲಾಗಿ ಸದರ ಪ್ರಕರಣದಲ್ಲಿ ಸರ್ಕಾರಿ ಸ್ವತ್ತಾದ, ಸೀಸಂ ತುಂಡುಗಳನ್ನು (10-0.123 ಘಮೀ) ಅಧಿಕೃತ ಪಾಸ ಯಾ ಪರ್ಮಿಟ್ ಇಲ್ಲದೆಯೇ ಸಾಗಿಸುತ್ತಿದ್ದ ಬಗ್ಗೆ ಗುನ್ನೆ ಮಾಡಲಾಗಿದೆ ಎಂದು ದೃಢಪಟ್ಟಿದೆ. (ತುಂಡುಗಳು 10 ನಗ 0.123 ಘಮೀ).

**ಅಂಶ ನಂ. (ಆ)**

ಗೂಡ್ಸ್ ರಿಕ್ಷಾ ವಾಹನ ಸಂ: ಕೆಎ-30/3740 ಇದರಲ್ಲಿ ದಿನಾಂಕ: 7.4.2002 ರಂದು ಬೆಳಿಗ್ಗೆ 6.30 ರ ಸುಮಾರಿಗೆ ರಾಷ್ಟ್ರೀಯ ಹೆದ್ದಾರಿ 17ರ ಬೋಳೆ ಕ್ರಾಸ್ ಹತ್ತಿರ ಅನಧಿಕೃತವಾಗಿ 10(ಹತ್ತು) ಸೀಸಂ ತುಂಡುಗಳನ್ನು ಕಳ್ಳ ಸಾಗಣೆ ಮಾಡುವಾಗ ಮುದ್ದೆ ಮಾಲು ಸಹಿತ ಹಿಡಿದಿದ್ದು, ಈ ಬಗ್ಗೆ ಪ್ರಥಮ ಮಾಹಿತಿ ಸಂಖ್ಯೆ: 1/02-03 ದಿನಾಂಕ: 7.4.2002ರಲ್ಲಿ ನಮೂದಿಸಿದ್ದು ಇದೆ. ಹಾಗೂ ತತ್ಸಂಬಂಧ ಪಂಚನಾಮೆ ಜರುಗಿಸಿ ಅದರಲ್ಲಿ ಕೂಡ ಗೂಡ್ಸ್ ರಿಕ್ಷಾವನ್ನು ಗುನ್ನೆಯಲ್ಲಿ ಬಳಸಿದ ಬಗ್ಗೆ ದಾಖಲಾಗಿದೆ (ಪಿ-3) ವಲಯ ಅರಣ್ಯ ಅಧಿಕಾರಿ, ಅಂಕೋಲಾ ಇವರು ಸಲ್ಲಿಸಿದ ವರದಿಯಲ್ಲಿ

(ಪಿ-1)ನಲ್ಲಿ ಕೂಡ ಸದರ ಗೂಡ್ಸ್ ರಿಕ್ಷಾವನ್ನು ಮೇಲ್ಕಾಣಿಸಿದ ಅರಣ್ಯ ಅಪರಾಧದಲ್ಲಿ ಬಳಸಿದ ಬಗ್ಗೆ ವರದಿಸಲಾಗಿದೆ. ಸದರ ವಾಹನದ ಚಾಲಕ ಹಾಗೂ ಮಾಲೀಕನಾದ ಅಪಾದಿತನು ವಲಯ ಅರಣ್ಯ ಅಧಿಕಾರಿಗಳ ಎದುರಿಗೆ ಬರೆದುಕೊಟ್ಟ ತಪ್ಪೊಪ್ಪಿಗೆ ಪತ್ರ (ಪಿ-2) ದಲ್ಲಿ ತಾನು ದಿನಾಂಕ: 7.4.2002 ರಂದು ತನ್ನ ಸ್ವಂತ ರಿಕ್ಷಾ ನಂ. ಕೆಎ-30/3740 ರಲ್ಲಿ ಅನಧಿಕೃತವಾಗಿ ಸೀಸಂ ತುಂಡುಗಳನ್ನು ತುಂಬಿಕೊಂಡು ಸಾಗಣೆ ಮಾಡುವಾಗ ಅರಣ್ಯ ಸಿಬ್ಬಂದಿಯವರು ಜಪ್ತಿ ಮಾಡಿದ್ದಾಗಿ ಒಪ್ಪಿಕೊಂಡಿದ್ದಾನೆ. ಇದೂ ಅಲ್ಲದೇ ಸರ್ಕಾರದ ಪರ ಸಾಕ್ಷಿಗಳ ವಿಚಾರಣೆಯಲ್ಲಿ (ಪಿಡಬ್ಲ್ಯೂ-1, ಪಿಡಬ್ಲ್ಯೂ-2, ಮತ್ತು ಪಿಡಬ್ಲ್ಯೂ-3,) ಇವರು ನೀಡಿದ ಹೇಳಿಕೆಗಳಲ್ಲಿ ಕೂಡ ಸದರ ವಾಹನ ಗೂಡ್ಸ್ ರಿಕ್ಷಾ ಇದನ್ನು ಮೇಲೆ ಕಾಣಿಸಿದ ಸೀಸಂ ತುಂಡುಗಳ ಕಳ್ಳ ಸಾಗಾಣಿಕೆಯ ಅರಣ್ಯ ಅಪರಾಧದಲ್ಲಿ ಉಪಯೋಗಿಸಿದ್ದು ಖಚಿತಪಡಿಸುತ್ತದೆ.

ವಾಹನದ ಮಾಲೀಕ ಹಾಗೂ ಚಾಲಕನಾದ ಅಪಾದಿತ ಶ್ರೀ ಮಂಜುನಾಥ ಪಿ. ನಾಯಕ ಇವನು ದಿನಾಂಕ: 11.6.2002 ರಂದು ತಾನು ಸಲ್ಲಿಸಿದ ಮನವಿಯಲ್ಲಿ ಸದರ ಗುನ್ಹೆಯಲ್ಲಿ ತನ್ನ ಗೂಡ್ಸ್ ರಿಕ್ಷಾ ಬಳಕೆ ಮಾಡಿಲ್ಲ ಅರಣ್ಯ ಇಲಾಖೆ ಸಿಬ್ಬಂದಿಗಳು ತನ್ನ ಹಾಗೂ ತನ್ನ ವಾಹನದ ಮೇಲೆ ಸುಳ್ಳು ಮೊಕದ್ದಮೆ ದಾಖಲಿಸಿದ್ದಾರೆ ಎಂದು ಹೇಳಿದ್ದಾನೆ. ಆದರೆ ಅವರು ತಮ್ಮ ಹೇಳಿಕೆಯನ್ನು ಪುಷ್ಟೀಕರಿಸಲು ಯಾವುದೇ ಸಾಕ್ಷ್ಯಾಧಾರಗಳನ್ನು ಒದಗಿಸಿಲ್ಲ. ಅದೇ ರೀತಿ ಅಪಾದಿತರ ನ್ಯಾಯವಾದಿಗಳೂ ಕೂಡ ದಿನಾಂಕ: 11.6.2002 ರಂದು ಪ್ರತ್ಯೇಕ ಮನವಿ ಸಲ್ಲಿಸಿ ತನ್ನ ಕಕ್ಷಿಗಾರನಾಗಲಿ ತನ್ನ ಕಕ್ಷಿಗಾರನ ವಾಹನವಾಗಲಿ ಯಾವುದೇ ಅರಣ್ಯ ಅಪರಾಧದಲ್ಲಿ ತೊಡಗಿದ್ದು ಇರುವುದಿಲ್ಲವೆಂದು ಹೇಳಿದ್ದಾರೆ. ಆದರೆ, ತಮ್ಮ ಹೇಳಿಕೆಯನ್ನು ದೃಢೀಕರಿಸುವ ಯಾವುದೇ ದಾಖಲೆಗಳನ್ನಾಗಲೀ, ಸಾಕ್ಷ್ಯಾಧಾರಗಳನ್ನಾಗಲೀ ಅವರು ಒದಗಿಸುವಲ್ಲಿ ವಿಫಲರಾಗಿದ್ದಾರೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿ ಪರಿಶೀಲಿಸಲಾಗಿ, ಸದರ ಗೂಡ್ಸ್ ರಿಕ್ಷಾ ನಂ. ಕೆಎ-30/3740 ಇದನ್ನು ಪ್ರಸ್ತುತ ಪ್ರಥಮ ಮಾಹಿತಿ ಸಂಖ್ಯೆ: 1/02-03 ದಿನಾಂಕ: 7.4.2002 ರಡಿಯಲ್ಲಿ ದಾಖಲಾದ ಪ್ರಕರಣದ ಸೀಸಂ ತುಂಡುಗಳ ಕಳ್ಳಸಾಗಣೆ ಮಾಡುವಲ್ಲಿ ಉಪಯೋಗ ಮಾಡಿದ್ದು ಸಾಬೀತಾಗಿದೆ.

**ಅಂಶ ನಂ. (ಇ)**

ದಿನಾಂಕ: 7.4.2002 ರಂದು ವಲಯ ಅರಣ್ಯ ಅಧಿಕಾರಿ, ಅಂಕೋಲಾ ಇವರು ಈ ನ್ಯಾಯಾಲಯದೆದುರು ಹಾಜರುಪಡಿಸಿದ ವರದಿ (ಪಿ-1) ಹಾಗೂ ಅದರೊಂದಿಗೆ ಸಲ್ಲಿಸಿದ ಪ್ರಥಮ ಮಾಹಿತಿ ಸಂಖ್ಯೆ: 1/02-03 ದಿನಾಂಕ: 7.4.2002 ಪಂಚನಾಮೆ (ಪಿ-3) ಅಲ್ಲದೇ ಆರೋಪಿಯು ನೀಡಿದ ತಪ್ಪೊಪ್ಪಿಗೆ ಹೇಳಿಕೆ (ಪಿ-2) ಇವುಗಳನ್ನೆಲ್ಲಾ ಪರಿಶೀಲಿಸಲಾಗಿದೆ. ಇವುಗಳನ್ವಯ ಆರೋಪಿತ ಅರ್ಜಿದಾರನು ಸ್ವತಃ ತನ್ನ ಗೂಡ್ಸ್ ರಿಕ್ಷಾ ವಾಹನ ಸಂ: ಕೆಎ-30/3740 ರಲ್ಲಿ ಅನಧಿಕೃತವಾಗಿ ಯಾವುದೇ ಪಾಸ ಯಾ ಪರ್ಮಿಟ್ ಅಥವಾ ತತ್ಸಂಬಂಧ ಯಾವುದೇ ಅಧಿಕೃತ ದಾಖಲೆ ಇಲ್ಲದೇ ಕಳ್ಳ ಸಾಗಣೆ ಮಾಡುವಾಗ ಸಿಕ್ಕಿಬಿದ್ದಿದ್ದಾನೆ ಎಂಬುದು ಖಚಿತವಾಗುತ್ತದೆ. ಈ ರೀತಿ ಸಿಕ್ಕಿ ಬಿದ್ದಾಗ ನೀಡಿರುವ ಲಿಖಿತ ತಪ್ಪೊಪ್ಪಿಗೆ ಪತ್ರದಲ್ಲಿ ತಾನು ಹಣದ ದುರಾಸೆಯಿಂದ ಪ್ರಸ್ತುತ ಪ್ರಕರಣದಲ್ಲಿ ನಮೂದಿಸಿದ ಸೀಸಂ ನಾಟುಗಳ ಕಳ್ಳ ಸಾಗಣೆ ಮಾಡಿದ್ದು ನಿಜವಿರುವುದಾಗಿ ಒಪ್ಪಿಕೊಂಡಿದ್ದಾನೆ. ಆದಾಗ್ಯೂ ಸಹಿತ ಅಪಾದಿತ ಅರ್ಜಿದಾರನು ದಿನಾಂಕ: 11.6.2002 ರಂದು ತಾನು ಸ್ವತಃ ಹಾಗೂ ತನ್ನ ನ್ಯಾಯವಾದಿಗಳ ಮೂಲಕ ಮತ್ತೊಂದು ಮನವಿಯನ್ನು ಸಲ್ಲಿಸಿ, ತಾನು ಯಾವುದೇ ರೀತಿಯ ಅರಣ್ಯ ಅಪರಾಧ ಮಾಡಿದ್ದು ಇರುವುದಿಲ್ಲ ಹಾಗೂ ತನ್ನ ಗೂಡ್ಸ್ ರಿಕ್ಷಾ ನಂ. ಕೆಎ-30/3740 ವಾಹನವನ್ನು ಯಾವುದೇ ಅರಣ್ಯ ಅಪರಾಧ ಮಾಡುವ ಸಲುವಾಗಿ ಬಳಸಿದ್ದು ಇರುವುದಿಲ್ಲ. ಈ ಬಗ್ಗೆ ಅರಣ್ಯ ಇಲಾಖೆ ಸಿಬ್ಬಂದಿಯವರು ತನ್ನ ಹಾಗೂ ತನ್ನ ವಾಹನದ ವಿರುದ್ಧ ಸುಳ್ಳು ಮೊಕದ್ದಮೆ ದಾಖಲಿಸಿದ್ದಾಗಿ ವಾದಿಸಿದ್ದಾರೆ. ಆದರೆ ಸದರ ಅರ್ಜಿದಾರನಾಗಲೀ, ಅವರ ಪರ ವಾಕಲತ್ತು ವಹಿಸಿದ ನ್ಯಾಯವಾದಿಗಳಾಗಲೀ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆಗಳಾಗಲೀ ಸಾಕ್ಷಿ ಪುರಾವೆಗಳನ್ನಾಗಲೀ ಒದಗಿಸುವಲ್ಲಿ ವಿಫಲರಾಗಿದ್ದಾರೆ. ಆದ್ದರಿಂದ ಫಿರ್ಯಾದುದಾರರು ಒದಗಿಸಿದ ದಾಖಲೆಗಳನ್ನು ಅಂದರೆ ಪ್ರಥಮ ಮಾಹಿತಿ ವರದಿ, ಪಂಚನಾಮೆ ಹಾಗೂ ಸಾಕ್ಷಿಗಳ ಹೇಳಿಕೆಗಳನ್ನು ಅಧಿಕೃತವೆಂದು ಪರಿಗಣಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ವಾಹನದ ಮಾಲೀಕರೇ ಸ್ವತಃ ತಮ್ಮ ಸ್ವಂತ ಗೂಡ್ಸ್ ರಿಕ್ಷಾ ವಾಹನ ನಂ. ಕೆಎ-30/3740 ನಲ್ಲಿ ಅನಧಿಕೃತವಾಗಿ ಪಾಸ, ಪರ್ಮಿಟ್ ಇಲ್ಲದೇ ಸೀಸಂ ಕಟ್ಟಿಗೆಯನ್ನು ಕಳ್ಳಸಾಗಣೆ ಮಾಡುವಾಗ ಸಿಕ್ಕುಬಿದ್ದಿದ್ದಾರೆ. ಇಲ್ಲಿ ಅಪರಾಧಿಯೇ ಸ್ವತಃ ಚಾಲಕ ಹಾಗೂ ವಾಹನದ ಮಾಲೀಕ ಹಾಗೂ ಅರ್ಜಿದಾರ ಆಗಿದ್ದಾರೆನ್ನುವುದು ದೃಢಪಟ್ಟಿರುವುದರಿಂದ ಈ ಗುನ್ಹೆಯನ್ನು ವಾಹನದ ಮಾಲೀಕ ಅಥವಾ ಅವರ ಏಜೆಂಟ್ ಅಥವಾ ಅದರ ಜವಾಬ್ದಾರಿ ಹೊಂದಿದ ವ್ಯಕ್ತಿಗಳಿಗೆ ಗೊತ್ತಿದ್ದು ಮಾಡಲಾಗಿದೆ. ಹಾಗೂ ಅವರು ಈ ಗುನ್ಹೆಯಲ್ಲಿ ಶಾಮೀಲಾಗಿದ್ದಾರೆ ಎಂದು ದೃಢಪಟ್ಟಿದೆ.

**ಅಂಶ ನಂ. (ಈ)**

ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ವಾಹನ ಸಂ: ಕೆಎ-30/3740 ಗೂಡ್ಸ್ ರಿಕ್ಷಾ ಇದು ದಿನಾಂಕ: 7.4.2002 ರಂದು ಪ್ರಥಮ ಮಾಹಿತಿ ಸಂಖ್ಯೆ: 1/02-03 ದಿನಾಂಕ: 7.4.2002 ರನ್ವಯ ದಾಖಲಾದ ಗುನ್ಹೆಯಲ್ಲಿ ಅನಧಿಕೃತವಾಗಿ ಸೀಸಂ ತುಂಡು (10 ನಗ-0.123 ಘಮೀ) ಗಳನ್ನು ಕಳ್ಳ ಸಾಗಾಣಿಕೆ ಮಾಡುತ್ತಿದ್ದುದು ದೃಢಪಟ್ಟಿರುವುದರಿಂದ, ಕರ್ನಾಟಕ ಅರಣ್ಯ ಕಾಯ್ದೆ 71ಎ ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ

**ಆದೇಶ**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಜಿ. ವಿ. ರಂಗರಾವ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವುದೇನೆಂದರೆ, ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಅರಣ್ಯ ಕಾಯ್ದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ವಾಹನ ನಂ. ಕೆಎ-30-3740 ಗೂಡ್ಸ್ ರಿಕ್ಷಾವನ್ನು ಮತ್ತು ಅದರಲ್ಲಿದ್ದ 10 (ಹತ್ತು) ಸೀಸಂ ತುಂಡುಗಳನ್ನು (0.123 ಘ.ಮೀ) ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

| | | | |
|---|---|---|---|
| 1) | ನೋಂದಣಿ ಸಂಖ್ಯೆ | : | ಕೆಎ-30-3740 |
| 2) | ಇಂಜೀನ್ ಸಂಖ್ಯೆ | : | ಡಿ-07008412 |
| 3) | ಚೆಸ್ಸಿ ಸಂಖ್ಯೆ | : | ಟಿ-05008423-ಎ-98 |
| 4) | ವಾಹನದ ಮಾದರಿ | : | ಗೂಡ್ಸ್ ರಿಕ್ಷಾ (ಮೂರು ಗಾಲಿ) |

ಈ ಆದೇಶವನ್ನು ಹೊರಡಿಸಿದ ದಿನಾಂಕದಿಂದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ: 17.01.2005 ರಂದು ಈ ನ್ಯಾಯಾಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**ಜಿ. ವಿ. ರಂಗರಾವ್, ಭಾ.ಅ.ಸೇ.,**

ಪಿ.ಆರ್.202

ಅಧಿಕಾರಿಯುತ ಅಧಿಕಾರಿ ಹಾಗೂ, ಉಪ ಅರಣ್ಯ, ಸಂರಕ್ಷಣಾಧಿಕಾರಿ,
ಕಾರವಾರ ವಿಭಾಗ, ಕಾರವಾರ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಪ್ರಿಲಿಮಿನರಿ ಅಧಿಸೂಚನೆ**

**ನಂ. ಕೆಎಸ್‌ಎ: ಸಿಆರ್:15/1990-91 ದಿನಾಂಕ: 18ನೇ ಜನವರಿ 2005**

ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ ಇವರ ಕಚೇರಿಯ ಅಧಿಸೂಚನೆ ಕೆ.ಎಸ್.ಎ. ಸಿಆರ್ 132/85-86 ದಿನಾಂಕ: 11.04.1986 ರ ಪ್ರಕಾರ ಮತ್ತು ದಿನಾಂಕ: 27.12.1988ರ ಅಧಿಸೂಚನೆಯ ಪ್ರಕಾರ ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ ಲಗ್ಗೆರೆ ಗ್ರಾಮದ ಸ.ನಂ.176/1ಎ ಮತ್ತು 176/1ಬಿ ರಲ್ಲಿ ಕ್ರಮವಾಗಿ 0-25 ಗುಂಟೆ ಮತ್ತು 2-20 ಎಕರೆ ಸೇರಿ ಒಟ್ಟು 3-05 ಎಕರೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ ನಿರ್ಮೂಲನೆ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತಾರೆ. ಈ ಅಧಿಸೂಚನೆಯನ್ನು ಭೂ ಮಾಲೀಕರು ರಿಟ್ ಪಿಟಿಷನ್ 4900/89 ಮತ್ತು 15895/90ರ ಪ್ರಕಾರ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿ, ತಮಗೆ ವಿಚಾರಣೆಗೆ ಅವಕಾಶ ನೀಡದೇ ಏಕಪಕ್ಷೀಯವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿರುವುದರಿಂದ, ಈ ಮೇಲ್ಕಂಡ ಅಧಿಸೂಚನೆಯನ್ನು ಪ್ರಶ್ನಿಸಿದ್ದಾರೆ. ಮಾನ್ಯ ಉಚ್ಚ ನ್ಯಾಯಾಲಯವು ಸಂಬಂಧಪಟ್ಟವರಿಗೆ ವಿಚಾರಣೆಗೆ ಅವಕಾಶ ನೀಡಿ, ಮರು ವಿಚಾರಣೆ ಮಾಡಿ ಕಾನೂನು ಪ್ರಕಾರ ಕ್ರಮ ಜರುಗಿಸಲು ಜಿಲ್ಲಾಧಿಕಾರಿಗಳಿಗೆ ಆದೇಶ ನೀಡಲಾಗಿದೆ.

ಈ ಹಿನ್ನಲೆಯಲ್ಲಿ ಭೂ ಮಾಲೀಕರು ಮತ್ತು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ ಇವರಿಗೆ ಅವಕಾಶವನ್ನು ನೀಡಿ ವಿಚಾರಣೆ ನಡೆಸಿ, ದಿನಾಂಕ: 27.07.2004 ನಂ. ಕೆಎಸ್‌ಸಿ ಸಿಆರ್: 15/90-91 ರಂತೆ ವಿವರವಾದ ಆದೇಶವನ್ನು ಮಾಡಲಾಗಿದೆ ಮತ್ತು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿರವರು ಕಳುಹಿಸಿದ ಪ್ರಸ್ತಾವನೆಯನ್ನು ಮರು ಪರಿಶೀಲಿಸಿದೆ.

ಸದರಿ ಕೊಳಚೆ ಪ್ರದೇಶದಲ್ಲಿ ಒಟ್ಟು 188 ವಾಸದ ಮನೆಗಳು ಇದ್ದು, ಶೀಟು ಮನೆಗಳು, ಹೆಂಚಿನ ಮನೆಗಳು, ಆರ್.ಸಿ.ಸಿ. ಕಟ್ಟಡಗಳು ಇದ್ದು, ಮನೆಗಳು ವಿವಿಧ ಅಳತೆ ಇದ್ದು, ಪ್ರತೀ ಮನೆಯ ಮಧ್ಯೆ ಜಾಗ ಬಿಟ್ಟಿರುವುದಿಲ್ಲ. ಒಂದಕ್ಕೊಂದು ಅಂಟಿಕೊಂಡಂತೆ ಇರುತ್ತದೆ. ಇದರಿಂದ ಸದರಿಯವರಿಗೆ ಗಾಳಿ ಬೆಳಕಿನ ವ್ಯವಸ್ಥೆ ಸರಿ ಇರುವುದಿಲ್ಲ. ಅಂತರಿಕ ರಸ್ತೆಗಳು ತೀರಾ ಕಿರಿದಾಗಿರುತ್ತದೆ ಮತ್ತು ಕುಡಿಯುವ ನೀರು, ದೀಪ, ರಸ್ತೆ, ಚರಂಡಿ, ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೆ ಅನಾರೋಗ್ಯಕರ ವಾತಾವರಣ ಉಂಟಾಗಿರುತ್ತದೆ ಎಂದು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯವರು ವರದಿ ಮಾಡಿದ್ದು, ಸದರಿ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯಕವೆಂದು ಕಂಡು ಬರುತ್ತದೆ.

ಸದರಿ ಕೊಳಚೆ ಪ್ರದೇಶ ಒಟ್ಟು 3-05 ಎಕರೆ ವಿಸ್ತೀರ್ಣವಿದ್ದು, ರಿ.ಸ.ನಂ. 176/1ಎ, 176/1ಬಿ ರಲ್ಲಿ ಬರುವ ವಾಣಿಜ್ಯ ಮಳಿಗೆಗಳ ಜಮೀನು ಹೊರತುಪಡಿಸಿ, ಉಳಿದ 2-38 ಎಕರೆ ಕೊಳಚೆ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3ರ ಪ್ರಕಾರ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಅಥವಾ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಶೇಷಾದ್ರಿಪುರ, ಬೆಂಗಳೂರು-20 ರವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳವರೆಗೆ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೆಂಗಳೂರು ನಗರ ಕಾರ್ಪೋರೇಷನ್ ವ್ಯಾಪ್ತಿಗೆ ಬರುವ ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ ಲಗ್ಗೆರೆ ಗ್ರಾಮದ ಸ.ನಂ. 176/1ಎ, 176/1ಬಿ ರಲ್ಲಿ ಮಹಾತ್ಮಾಗಾಂಧಿ ನಗರ ಕೊಳಚೆ ಪ್ರದೇಶದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಆಸ್ತಿ ಸಂಖ್ಯೆ | ವಿಸ್ತೀರ್ಣ (ಚ.ಅ) | ಚೆಕ್ಕುಬಂದಿ | | | |
|---|---|---|---|---|---|---|---|---|
| | | | | | ಪೂರ್ವಕ್ಕೆ | ಪಶ್ಚಿಮಕ್ಕೆ | ಉತ್ತರಕ್ಕೆ | ದಕ್ಷಿಣಕ್ಕೆ |
| 1. | ಮಹಾತ್ಮಾಗಾಂಧಿ ನಗರ ಕೊಳಚೆ ಪ್ರದೇಶ | ಪಾಪಯ್ಯ ಮತ್ತು ಮಕ್ಕಳು | 170/1ಎ | 0-23 | ರಿ.ಸ.ನಂ. 176/1ಎ | ರಿ.ಸ.ನಂ. 176/2ಬಿ | ವಾಣಿಜ್ಯ ಮಳಿಗೆ ಮತ್ತು ಪೈಪ್‌ಲೈನ್ ರಸ್ತೆ | ರಿ.ಸ.ನಂ. 176/2ಬಿ 176/1ಬಿ |
| | | | 176/1ಬಿ | 2-15 | ವಾಣಿಜ್ಯ ಮಳಿಗೆ, 176/1ಸಿ | 176/2ಎ | 176/1ಎ | ರಸ್ತೆ,177, 178 |

**ಎಂ. ಎ. ಸಾಧಿಕ್**

ಪಿ.ಆರ್.203

ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001**

**ಪ್ರಕಟಣೆ ಸಂಖ್ಯೆ: ಕರಾಆ/ಆಡಳಿತ/49/2004 ದಿನಾಂಕ: 28ನೇ ಜನವರಿ 2005**

**ವಿಷಯ :** ಗ್ರಾಹಕರ ಸಂರಕ್ಷಣಾ ಕಾಯ್ದೆ 1986ರ ಕಲಂ 10 (1ಎ) ರಡಿಯಲ್ಲಿ ಜಿಲ್ಲಾ ವೇದಿಕೆಯ ಅಧ್ಯಕ್ಷರ ಆಯ್ಕೆ ಬಗ್ಗೆ.

ಮಂಡ್ಯಾ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರ ಆಯ್ಕೆಗಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಈ ಮೂಲಕ ಆಹ್ವಾನಿಸುತ್ತಿದ್ದು, ನಿಗದಿತ ನಮೂನೆಯಲ್ಲಿ ಭರ್ತಿ ಮಾಡಿದ ಅರ್ಜಿಗಳನ್ನು ಅಗತ್ಯ ದಾಖಲೆಗಳೊಂದಿಗೆ ದಿನಾಂಕ: 14ನೇ ಮಾರ್ಚ್ 2005ರ ಸಂಜೆ 5.00 ಗಂಟೆಯೊಳಗೆ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001 ಇಲ್ಲಿಗೆ ಸಲ್ಲಿಸುವುದು.

**ಅರ್ಹತೆಗಳು:**

1) ಗ್ರಾಹಕ ಸಂರಕ್ಷಣಾ ಕಾಯ್ದೆ 1986 ರ ಕಲಂ 10(1) (ಎ)ರನ್ವಯ ಜಿಲ್ಲಾ ನ್ಯಾಯಾಧೀಶರಾಗಿದ್ದವರು ಅಥವಾ ಜಿಲ್ಲಾ ನ್ಯಾಯಧೀಶರಾಗಿರುವವರು ಅಥವಾ ಜಿಲ್ಲಾ ನ್ಯಾಯಾಧೀಶರಾಗಿ ನೇಮಕಾತಿ ಹೊಂದಲು ಅರ್ಹರಿರುವವರು ಮಾತ್ರ ಜಿಲ್ಲಾ ವೇದಿಕೆಯ ಅಧ್ಯಕ್ಷರಾಗಿ ನೇಮಕಾತಿ ಹೊಂದಲು ಅರ್ಹರಿರುವರು.
2) ಜಿಲ್ಲಾ ನ್ಯಾಯಾಧೀಶರಾಗಿ ನೇಮಕ ಹೊಂದಲು ಅರ್ಹರೆಂದರೆ, ಅಂಗೀಕೃತ ವಿಶ್ವವಿದ್ಯಾಲಯ ಪದವೀಧರಾಗಿರುವುದರ ಜೊತೆಗೆ ನ್ಯಾಯವಾದಿಗಳಾಗಿ ಕನಿಷ್ಠ 7 ವರ್ಷಗಳಿಗೂ ಹೆಚ್ಚು ಅವಧಿಯಲ್ಲಿ ಕಾರ್ಯನಿರ್ವಹಿಸಿರಬೇಕು.
3) ಅರ್ಜಿಯನ್ನು ಸಲ್ಲಿಸುವ ದಿನಾಂಕದಂದಿಗೆ 35 ವರ್ಷಗಳ ವಯಸ್ಸನ್ನು ಮೀರಿರಬೇಕು ಹಾಗೂ 59 ವರ್ಷ ವಯಸ್ಸಿನೊಳಗೆ ಇರುವವರು ಮಾತ್ರ ಅರ್ಜಿಯನ್ನು ಸಲ್ಲಿಸಬಹುದು.
4) ಅರ್ಜಿಯನ್ನು ಸಲ್ಲಿಸುವ ದಿನಾಂಕದಂದಿಗೆ ಕನಿಷ್ಠ 7 ವರ್ಷಗಳಿಗೂ ಹೆಚ್ಚು ಅವಧಿಯಲ್ಲಿ ನ್ಯಾಯವಾದಿಗಳಾಗಿ ಕಾರ್ಯನಿರ್ವಹಿಸಿರುವುದರ ಜೊತೆಗೆ, ಉತ್ತಮ ಗುಣ ಮತ್ತು ನಡತೆಯನ್ನು ಹೊಂದಿರಬೇಕು.
5) ಜಿಲ್ಲಾ ವೇದಿಕೆಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಲು ಮತ್ತು ಗ್ರಾಹಕರ ವ್ಯಾಜ್ಯಗಳನ್ನು ಇತ್ಯರ್ಥ ಮಾಡಲು ತೀರ್ಪುಗಳನ್ನು ಬರೆಯುವ ಸಾಮರ್ಥ್ಯ ಹೊಂದಿರಬೇಕು.
6) ಅರ್ಜಿದಾರರು ತಮ್ಮ ಜನ್ಮ ದಿನಾಂಕ, ವಿದ್ಯಾರ್ಹತೆ, ಅನುಭವ, ಗುಣ-ನಡತೆ ಇವುಗಳಿಗೆ ಸಂಬಂಧಿಸಿದಂತಹ ದಾಖಲೆಗಳ ಪ್ರತಿಗಳನ್ನು ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಿಸಿ ಅರ್ಜಿಯೊಂದಿಗೆ ಸಲ್ಲಿಸುವುದು.
7) ಅರ್ಜಿದಾರರು ಸರ್ಕಾರಿ ಸೇವೆಯಲ್ಲಿದ್ದರೆ, ಅರ್ಜಿಗಳನ್ನು ತಮ್ಮ ಮೇಲಾಧಿಕಾರಿಗಳ: ನೇಮಕಾತಿ ಪ್ರಾಧಿಕಾರದ ಮೂಲಕ ಸಲ್ಲಿಸಬೇಕು.

ಜಿಲ್ಲಾ ವೇದಿಕೆಯ ಅಧ್ಯಕ್ಷರಾಗಿ ನೇಮಕಾತಿ ಹೊಂದುವವರು ಜಿಲ್ಲಾ ನ್ಯಾಯಾಧೀಶರ ವೇತನ ಮತ್ತು ಇತರೆ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ. ನೇಮಕಾತಿಯು 5 ವರ್ಷಗಳ ಕಾಲಿಕ ಸೇವಾವಧಿಯದಾಗಿರುತ್ತದೆ. ನಿಗದಿತ ನಮೂನೆಯ ಅರ್ಜಿಗಳನ್ನು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ ಅಥವಾ ಮಂಡ್ಯಾ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯಲ್ಲಿ ಖುದ್ದಾಗಿ ಹಾಜರಾಗಿ ಪಡೆಯಬಹುದು. ಅಂಚೆ ಮೂಲಕ ಅರ್ಜಿಗಳನ್ನು ಕಳುಹಿಸುವ ವ್ಯವಸ್ಥೆ ಇರುವುದಿಲ್ಲ.

**ನ್ಯಾಯಮೂರ್ತಿ ಚಂದ್ರಶೇಖರಯ್ಯ**
ಅಧ್ಯಕ್ಷರು,
ರಾಜ್ಯ ಗ್ರಾಹಕರ ಆಯೋಗ, ಬೆಂಗಳೂರು.

________________________________ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷರ/ಸದಸ್ಯರ ನೇಮಕಾತಿಗೆ ಅರ್ಜಿ

(ಅಭ್ಯರ್ಥಿಯು ತನ್ನ ಸ್ವಂತ ಕೈಬರಹದಲ್ಲಿ ಭರ್ತಿ ಮಾಡತಕ್ಕದ್ದು)

ಅ. ಅರ್ಜಿಗಳನ್ನು ಕರೆದಿರುವ ರಾಜ್ಯ ಆಯೋಗದ ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ

ಆ. ಸದರಿ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿರುವ ದಿನಾಂಕ

ಇ. ಸದರಿ ಅಧಿಸೂಚನೆ ದಿನಪತ್ರಿಕೆಗಳಲ್ಲಿ ಪ್ರಕಟವಾಗಿರುವ ದಿನಾಂಕ (ಯಾವ ಪತ್ರಿಕೆ, ಯಾವ ದಿನಾಂಕದಂದು, ಯಾವ ಪುಟ ಮತ್ತು ಯಾವ ಅಂಕಣ ಎಂಬುದನ್ನು ನಿರ್ದಿಷ್ಟಪಡಿಸಿ)

| ಇತ್ತೀಚಿನ ಪಾಸ್‌ಪೋರ್ಟ್ ಸೈಜ್‌ನ ಭಾವಚಿತ್ರವನ್ನು ಲಗತ್ತಿಸಿ |
|---|

| | | |
|---|---|---|
| 1. | ಅಭ್ಯರ್ಥಿಯ ಪೂರ್ಣ ಹೆಸರು | ................................................................ (ಸರ್‌ನೇಮ್) (ಹೆಸರು) |
| 2. | ನೀವು ನಿಮ್ಮ ಹೆಸರನ್ನು ಯಾವಾಗಲಾದರೂ ಬದಲಾಯಿಸಿಕೊಂಡಿದ್ದೀರಾ? ಹಾಗಿದ್ದಲ್ಲಿ, ಅದಕ್ಕೆ ಕಾರಣಗಳೊಂದಿಗೆ, ಪೂರ್ಣ ವಿವರಗಳನ್ನು ಮತ್ತು ಅದನ್ನು ಆಧರಿಸುವ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಒದಗಿಸುವುದು. (ಈ ಕಾಲಂನಲ್ಲಿ ಒದಗಿಸಿರುವ ಖಾಲಿ ಜಾಗ ಸಾಲದೇ ಇದ್ದ ಸಂದರ್ಭದಲ್ಲಿ, ಹೆಚ್ಚುವರಿ ಪುಟಗಳನ್ನು ಉಪಯೋಗಿಸಿ) | |
| 3. | **ವಿಳಾಸಗಳು:** | |
| ಅ. | ಹಾಲಿ ನಿವಾಸದ ವಿಳಾಸ, (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ, ಫ್ಯಾಕ್ಸ್ ಸಂಖ್ಯೆಯೊಂದಿಗೆ) | (ಅ) |

| | |
|---|---|
| ಆ. ನೀವು ಯಾವುದಾದರೂ ಉದ್ಯೋಗದಲ್ಲಿದ್ದೀರಾ ಅಥವಾ ಯಾವುದೇ ವೃತ್ತಿಯಲ್ಲಿದ್ದೀರಾ? ಹಾಗಿದ್ದಲ್ಲಿ ಪೂರ್ಣ ವಿವರಗಳನ್ನು ಕೊಡಿ. (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ ಮತ್ತು ಫ್ಯಾಕ್ಸ್ ಸಂಖ್ಯೆ) | (ಆ) |
| 4. ತಂದೆಯ ಅಥವಾ ಪತಿಯ:<br>(ಅ) ಪೂರ್ಣ ಹೆಸರು<br>(ಆ) ಪ್ರಸ್ತುತ ನಿವಾಸದ ಪೂರ್ಣ ಅಂಚೆ ವಿಳಾಸ, ದೂರವಾಣಿ ಸಂಖ್ಯೆಯೊಂದಿಗೆ (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು)<br>(ಇ) ವೃತ್ತಿ-ವಿಳಾಸ ಮತ್ತು ದೂರವಾಣಿ ಸಂಖ್ಯೆಯೊಂದಿಗೆ (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು) | <br>(ಅ)<br>(ಆ)<br>(ಇ) |
| 5. ಹುಟ್ಟಿದ ದಿನಾಂಕ (ಕ್ರಿಸ್ತಶಕದಲ್ಲಿ) ವಯಸ್ಸನ್ನು ರುಜುವಾತುಪಡಿಸಲು ಹುಟ್ಟಿದ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿಯನ್ನು ಲಗತ್ತಿಸಿ. | |
| 6. (ಅ) ಜನ್ಮ ಸ್ಥಳ, ಜಿಲ್ಲೆ ಮತ್ತು ರಾಜ್ಯ.<br>(ಆ) ಪ್ರಸ್ತುತ ನೆಲೆಸಿರುವ ಜಿಲ್ಲೆ | (ಅ)<br>(ಆ) |
| 7. (ಅ) ನಿಮ್ಮ ಮತ<br>(ಆ) ನೀವು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ್ದೀರಾ? ಹೌದು ಅಥವಾ ಇಲ್ಲ ಎಂದು ಉತ್ತರಿಸುವುದು. ಉತ್ತರ ಹೌದು ಆಗಿದ್ದರೆ, ನೀವು ಸೇರಿರುವ ಸಮುದಾಯವನ್ನು ಹೆಸರಿಸುವುದು | (ಅ)<br>(ಆ) |

8. ಎಸ್.ಎಸ್.ಎಲ್.ಸಿ.ಯಿಂದ ಮೊದಲ್ಗೊಂಡು ವಿದ್ಯಾರ್ಹತೆ - ವಿದ್ಯಾಭ್ಯಾಸದ ಸ್ಥಳ, ವರ್ಷ, ಶಾಲೆ/ಕಾಲೇಜಿನ ವಿವರಗಳೊಂದಿಗೆ. (ದೃಢೀಕರಿಸಿದ ಪದವಿ/ಡಿಪ್ಲೊಮಾ ಪ್ರಮಾಣಪತ್ರಗಳ ಪ್ರತಿ ಲಗತ್ತಿಸುವುದು).

| ಶಾಲೆ/ಕಾಲೇಜು ಮತ್ತು ವಿಶ್ವವಿದ್ಯಾಲಯಗಳ ಹೆಸರು ಮತ್ತು ಪೂರ್ಣ ವಿಳಾಸ | ಪ್ರವೇಶದ ದಿನಾಂಕ | ನಿರ್ಗಮನದ ದಿನಾಂಕ | ತೇರ್ಗಡೆಯಾದ ಪರೀಕ್ಷೆ/ಪದವಿಯ ಹೆಸರು |
|---|---|---|---|
| | | | |

9. ನೀವು ಯಾವಾಗಲಾದರೂ ಉದ್ಯೋಗದಲ್ಲಿದ್ದದ್ದರೆ, ವಿವರ ಒದಗಿಸಿ.

| ಹುದ್ದೆಯ ಪದನಾಮ ಅಥವಾ ಕೆಲಸದ ವಿವರಣೆ | ಅವಧಿ | | ಕಚೇರಿ/ಸಂಸ್ಥೆಯ ಪೂರ್ಣ ವಿಳಾಸ | ಉದ್ಯೋಗವನ್ನು ತ್ಯಜಿಸಲು ಕಾರಣಗಳು |
|---|---|---|---|---|
| | ಇಂದ (ದಿನಾಂಕ) | ವರೆಗೆ (ದಿನಾಂಕ) | | |
| | | | | |

| | |
|---|---|
| 10. ನಿಮ್ಮ ಕಾಲೇಜು ಅಥವಾ ವಿಶ್ವವಿದ್ಯಾಲಯಕ್ಕೆ ಸಂಬಂಧಿಸದ ಮತ್ತು ನಿಮಗೆ ಸಂಬಂಧಿಕರಲ್ಲದ, ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಪಡೆದ, ಚಾರಿತ್ರ್ಯ ಪ್ರಮಾಣಪತ್ರಗಳನ್ನು ಮೂಲ ಪ್ರತಿಯಲ್ಲಿ ಲಗತ್ತಿಸಿದ್ದೀರಾ? ಇಂತಹ ಪ್ರಮಾಣಪತ್ರ ಈ ಅರ್ಜಿಗೆ ಸಹಬಂಧಿಸಿರುವ ನಮೂನೆಯಲ್ಲಿ ಇರತಕ್ಕದ್ದು ಮತ್ತು ಅರ್ಜಿಯ ದಿನಾಂಕದ ಹಿಂದಿನ 6 ತಿಂಗಳ ಒಳಗೆ ಕೊಟ್ಟಂತಹ ಪ್ರಮಾಣಪತ್ರವಾಗಿರತಕ್ಕದ್ದು. | |
| 11. (ಅ) ನೀವು ಯಾವಾಗಲಾದರೂ ಅಭಿಯೋಜನೆಗೆ ಒಳಗಾಗಿದ್ದೀರಾ, ಬಂಧನಕ್ಕೆ ಒಳಗಾಗಿದ್ದೀರಾ ಅಥವಾ ಕಟ್ಟುಪಾಡಿಗೊಳಗಾಗಿದ್ದೀರಾ/ಜುಲ್ಮಾನೆಗೊಳಗಾಗಿದ್ದೀರಾ ಅಥವಾ ಯಾವುದೇ ನ್ಯಾಯಾಲಯದಿಂದ ಯಾವುದೇ ಅಪರಾಧಕ್ಕೆ ಅಪರಾಧಿಯೆಂದು ತೀರ್ಮಾನಿಸಲ್ಪಟ್ಟಿದ್ದೀರಾ?<br>(ಆ) ಈ ಅರ್ಜಿಯನ್ನು ಹಾಕುವ ಸಮಯದಲ್ಲಿ ನಿಮ್ಮ ವಿರುದ್ಧ ಯಾವುದೇ ನ್ಯಾಯಾಲಯದಲ್ಲಿ ಯಾವುದೇ ಪ್ರಕರಣ ಬಾಕಿ ಇದೆಯೇ? | (ಅ)<br>(ಆ) |

| | | |
|---|---|---|
| | (ಇ) ಮೇಲಿನ (ಅ) ಅಥವಾ/ಮತ್ತು (ಆ)ಗಳಿಗೆ ಯಾವುದಕ್ಕಾದರೂ ನಿಮ್ಮ ಉತ್ತರ ಹೌದು ಎಂದಾದರೆ, ಬಂಧನ/ಜುಲ್ಮಾನೆ, ಅಪರಾಧ ಸಿದ್ಧಿ, ದಂಡಾದೇಶ, ಮುಂತಾದ ವಿವರಗಳನ್ನು ಕೊಡುವುದು. | (ಇ) |
| 12. | (ಅ) ನಿಮ್ಮನ್ನು ಯಾವಾಗಲಾದರೂ ಸೇವೆಯಿಂದ ವಜಾ (dismiss) ಮಾಡಲಾಗಿದೆಯೇ/ತೆಗೆದು ಹಾಕಲಾಗಿದೆಯೇ (removed)/ಹೊರ ಹಾಕಲಾಗಿದೆಯೇ (terminated)/ ಕಡ್ಡಾಯವಾಗಿ ನಿವೃತ್ತಿಗೊಳಿಸಲಾಗಿದೆಯೇ ಅಥವಾ ಸರ್ಕಾರಿ ಸೇವೆಗೆ ಪ್ರವೇಶ ಪಡೆಯದಂತೆ ನಿರ್ಬಂಧಿಸಲಾಗಿದೆಯೇ (debarred)<br>(ಆ) ಉತ್ತರ 'ಹೌದು' ಆದರೆ, ಪ್ರಕರಣದ ಪೂರ್ಣ ವಿವರಗಳನ್ನು, ಸಂಬಂಧಪಟ್ಟ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ಒದಗಿಸತಕ್ಕದ್ದು. ದುರ್ನಡತೆಗಾಗಿ ಅಂತಹ ವ್ಯವಹರಣೆಯನ್ನು ನಿಮ್ಮ ವಿರುದ್ಧ ನಡೆಸಲಾಗಿದ್ದಲ್ಲಿ, ಅದನ್ನು ಸ್ಪಷ್ಟವಾಗಿ ತಿಳಿಸತಕ್ಕದ್ದು. | (ಅ)<br>(ಆ) |
| 13. | ಈ ಕೆಳಕಂಡ ದಾಖಲೆಗಳನ್ನು ಲಗತ್ತಿಸಲಾಗಿದೆಯೇ?<br>1) ವಯಸ್ಸನ್ನು ಋಜುವಾತುಪಡಿಸಲು ಜನ್ಮ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿ.<br>2) ಹುದ್ದೆಗೆ ಬೇಕಾದ ವಿದ್ಯಾರ್ಹತೆ/ಅನುಭವಕ್ಕೆ ಸಂಬಂಧಿಸಿದ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿ. (ದಯವಿಟ್ಟು ಗ್ರಾಹಕ ಹಿತರಕ್ಷಣಾ ಅಧಿನಿಯಮ, 1986ರ ಸೆಕ್ಷನ್ 10/16ನ್ನು ನೋಡಿ). | |
| 14. | ಅರ್ಜಿದಾರರು ವಕೀಲರಾಗಿದ್ದಲ್ಲಿ, ಅಧ್ಯಕ್ಷರು/ಸದಸ್ಯರಾಗಿ ಅವರ ನೇಮಕಾತಿಯ ನಂತರ, ಅವರ ಕೇಂದ್ರ ಸ್ಥಳವಾಗಬಹುದಾದ ಸ್ಥಳದಲ್ಲಿ, ಅವರ ಸಂಬಂಧಿಕರು ಯಾರಾದರೂ ವಕೀಲಿ ವೃತ್ತಿ ನಡೆಸುತ್ತಿದ್ದಾರೆಯೇ? ಹಾಗಿದ್ದಲ್ಲಿ, ವಿವರಗಳನ್ನು ಒದಗಿಸುವುದು. | |
| 15. | ಅರ್ಜಿದಾರನ ಈಗಿನ ವಾರ್ಷಿಕ ವರಮಾನ-ವೃತ್ತಿ, ವ್ಯಾಪಾರ, ಕಸುಬು, ಉದ್ಯೋಗ, ವ್ಯವಹಾರ, ಆಸ್ತಿ ಬಾಡಿಗೆ/ಗುತ್ತಿಗೆ, ಮುಂತಾದವುಗಳಿಂದ ವಿವರಗಳನ್ನು ಒದಗಿಸುವುದು. | |
| 16. | ಅರ್ಥಶಾಸ್ತ್ರ, ಕಾನೂನು, ವಾಣಿಜ್ಯ, ಲೇಖಾಶಾಸ್ತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಅಥವಾ ಆಡಳಿತ, ಇವುಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ನಿಮಗೆ ಇರುವ ಜ್ಞಾನ ಮತ್ತು/ಅಥವಾ ಅನುಭವ/ ಸಾಮರ್ಥ್ಯ ವಿವರ ನೀಡುವುದು. (ಯಾವುದಾದರೂ ಇದ್ದಲ್ಲಿ, ದೃಢೀಕರಿಸಿದ ದಾಖಲೆಗಳ ಪ್ರತಿ ಒದಗಿಸುವುದು), (ದಯವಿಟ್ಟು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986ರ ಕಲಂ 10/16ರನ್ನು ನೋಡಿ) | |

**ಸೂಚನೆ:** "ದೃಢೀಕೃತ ಪ್ರತಿ" ಎಂದರೆ ರಾಜ್ಯ ಅಥವಾ ಕೇಂದ್ರ ಸರ್ಕಾರದ ಪತ್ರಾಂಕಿತ ಅಧಿಕಾರಿ ಅಥವಾ ಸಾರ್ವಜನಿಕ ನೋಟರಿ "ಯಥಾಪ್ರತಿ" ಎಂದು ಅನುಪ್ರಮಾಣಿಸಿದ ಸಂಬಂಧಪಟ್ಟ ದಾಖಲೆಯ ಛಾಯಾಪ್ರತಿ.

## ಅರ್ಜಿದಾರರಿಂದ ಘೋಷಣೆ

______________________________ ಎಂಬ ಹೆಸರಿನವನಾದ ನಾನು, ಮೇಲ್ಕಂಡ ಮಾಹಿತಿಯು, ನನ್ನ ಅತ್ಯುತ್ತಮ ಅರಿವು ಮತ್ತು ನಂಬಿಕೆಗಳಂತೆ, ಸರಿಯಾಗಿ ಹಾಗೂ ಸಂಪೂರ್ಣವಾಗಿರುವುದಾಗಿ ಈ ಮೂಲಕ ಘೋಷಿಸುತ್ತೇನೆ. ನೇಮಕಾತಿಗೆ ಯೋಗ್ಯತೆಯನ್ನು ದುರ್ಬಲಗೊಳಿಸುವ ಯಾವುದೇ ಸಂದರ್ಭಗಳು ನನಗೆ ತಿಳಿದಿರುವುದಿಲ್ಲ.

2. ನಾನು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ ಸಂಖ್ಯೆ: 68/1986) ಮತ್ತು ಅದರಡಿ ರಚಿಸಲಾಗಿರುವ ರಾಜ್ಯ ಮತ್ತು ಕೇಂದ್ರದ ನಿಯಮಾವಳಿಗಳನ್ನು ಓದಿರುತ್ತೇನೆ. ಆ ಕಾನೂನುಗಳ ಅಡಿ ನಾನು *ಜಿಲ್ಲಾ ವೇದಿಕೆಯ/*ರಾಜ್ಯ ಆಯೋಗದ *ಅಧ್ಯಕ್ಷ/*ಸದಸ್ಯನಾಗಿ ನೇಮಕವಾಗಲು ಅರ್ಹತೆ ಹೊಂದಿರುವುದಾಗಿ ಘೋಷಿಸುತ್ತೇನೆ.

3. ನಾನು ಬಯಸುತ್ತಿರುವ ಸ್ಥಾನವು ಪೂರ್ಣಕಾಲಿಕ ಉದ್ಯೋಗ ಎಂಬುದನ್ನು ನಾನು ಅರಿತಿದ್ದೇನೆ. *ಅಧ್ಯಕ್ಷ/*ಸದಸ್ಯನಾಗಿ ನಾನು ನೇಮಕಗೊಂಡರೆ, ನನ್ನ ಪೂರ್ಣ ಕಾಲವನ್ನು ಅದಕ್ಕೆ ಸಮರ್ಪಿಸಲು ವಾಗ್ದಾನ ಮಾಡುತ್ತೇನೆ.

4. *ಅಧ್ಯಕ್ಷ/*ಸದಸ್ಯನಾಗಿ ನನ್ನ ಕಾರ್ಯಗಳ ಮೇಲೆ ಪ್ರತಿಕೂಲ ಪರಿಣಾಮ ಬೀರುವಂತಹ ಯಾವುದೇ ಹಣಕಾಸು ವ್ಯವಹಾರವನ್ನು ಅಥವಾ ಇತರ ಹಿತಾಸಕ್ತಿಯನ್ನು ನಾನು ಹೊಂದಿಲ್ಲ ಮತ್ತು ಹೊಂದುವುದಿಲ್ಲ.

*5. ನಾನು ವಕೀಲ ವೃತ್ತಿಯನ್ನು ______________________ ನಲ್ಲಿ (ಸ್ಥಳವನ್ನು ನಮೂದಿಸಬೇಕು) ನಡೆಸುತ್ತಿದ್ದು, ಈ ಅರ್ಜಿಯನ್ನು ಸಲ್ಲಿಸುತ್ತಿರುವ *ಅಧ್ಯಕ್ಷ/*ಸದಸ್ಯನಾಗಿ ಕಾರ್ಯನಿರ್ವಹಿಸುವ ಅವಧಿಗೆ, ಆ ವೃತ್ತಿಯನ್ನು ತ್ಯಜಿಸುತ್ತೇನೆ.

* ಅನ್ವಯಿಸದಿದ್ದಲ್ಲಿ ಹೊಡೆದುಹಾಕಿ.

ಸ್ಥಳ:

ದಿನಾಂಕ: ಅರ್ಜಿದಾರರ ಸಹಿ

## ಸಹಬಂಧ

## ಚಾರಿತ್ರ್ಯ ಪ್ರಮಾಣ ಪತ್ರ

ಶ್ರೀ ______________________ ಇವರ ಮಗನಾದ/ಮಗಳಾದ/ಹೆಂಡತಿಯಾದ ಶ್ರೀ/ಶ್ರೀಮತಿ ______________________ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷ/ಸದಸ್ಯ ಹುದ್ದೆಗೆ ಅರ್ಜಿದಾರರಾಗಿದ್ದು, ಇವರು ನನಗೆ ಕಳೆದ __________ ವರ್ಷ ಮತ್ತು __________ ತಿಂಗಳಿನಿಂದ ಪರಿಚಿತರಾಗಿರುವರೆಂದು ದೃಢೀಕರಿಸಿದೆ. ಅರ್ಜಿದಾರರು ಒಳ್ಳೆಯ ನೈತಿಕ ಚಾರಿತ್ರ್ಯ ಮತ್ತು ಖ್ಯಾತಿಯನ್ನು ಹೊಂದಿದವರಾಗಿದ್ದಾರೆ. ಗ್ರಾಹಕ ರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ 68/1986)ರ ಕಲಂ 10/16ನ್ನು ಓದಿದ ನಂತರ, ಅರ್ಜಿದಾರರು ಅಂತಹ ಅಧ್ಯಕ್ಷ/ಸದಸ್ಯತ್ವಕ್ಕೆ ನೇಮಕವಾಗಲು ಅನರ್ಹರಾಗುವಂತಹ ಯಾವುದೇ ಪೂರ್ವ ನಡತೆ ಹೊಂದಿಲ್ಲವೆಂದು ನಾನು ದೃಢೀಕರಿಸುತ್ತೇನೆ.

ಶ್ರೀ/ಶ್ರೀಮತಿ ______________________ (ಅರ್ಜಿದಾರರ ಹೆಸರು) ನನಗೆ ಸಂಬಂಧಿಕರಲ್ಲ.

ಸ್ಥಳ: ಸಹಿ ಮತ್ತು ಹೆಸರು; ಮನೆಯ ಪೂರ್ಣ ವಿಳಾಸ ಮತ್ತು

ದಿನಾಂಕ: ಕಚೇರಿ/ವೃತ್ತಿಯ ಪೂರ್ಣ ವಿಳಾಸ ಹಾಗೂ ಮನೆಯ ಮತ್ತು ಕಚೇರಿಯ ದೂರವಾಣಿ ಸಂಖ್ಯೆ.

## APPLICATION FOR APPOINTMENT AS PRESIDENT/MEMBER OF ______________________ DISTRICT CONSUMER DISPUTES REDRESSAL FORUM/KARNATAKA STATE CONSUMER DISPUTES REDRESSAL COMMISSION

**(To be filled in by the Candidate in his own handwriting)**

A. No. and Date of Notification of the State Commission calling for applications.

B. Date of Publication of the Notification in the Karnataka Gazette

C. Date of Publication of the Notification in daily newspapers (specify which newspaper, of which date; on which page; and in what columns)

AFFIX YOUR RECENT PASSPORT SIZE PHOTOGRAPH

| | | |
|---|---|---|
| 1. | Full name of the Applicant (in capitals) | ........................................................<br>(Surname) (Name) |
| 2. | Have you ever changed your name; If so, please give details alongwith reasons therefor and attested copies of supporting documents.<br>(If the space provided in this column is not sufficient, please use additional sheets) | |
| 3. | **ADDRESSES:** | |
| (a) | Present Residential Address with Telephone No., E-mail address, Fax No.: | (a) |
| (b) | Are you employed or engaged in any profession. If yes,, give complete details (Tel. No./E-Mail address/Fax No.) | (b) |

| | |
|---|---|
| 4. Father's/Husband 's<br>(a) Name in full<br>(b) Present residential postal address with Tel.No. (if dead, give last address)<br>(c) Profession, with address and Tel.No. | (a)<br>(b)<br>(d) |
| 5. Date of birth (in Christian Era). Enclose an attested copy of the S.S.L.C. or Equivalent Examination Certificate containing Date of Birth in proof of age. | |
| 6. (a) Place of Birth, District and State<br>(b) District of present domicile | (a)<br>(b) |
| 7. (a) Your Religion<br>(b) Are you a member of a Scheduled Caste/ Scheduled Tribe? Answer yes or no (and if the answer is yes state the Community). | (a)<br>(b) |

8. Educational Qualification showing places of education with year in Schools and Colleges from SSLC level. (Attested copy of Degree/Diploma Certificate to be enclosed).

| Name of the School/College and University with full address | Date of Entry | Date of leaving | Name of the Examn./Degree passed |
|---|---|---|---|
| | | | |

9. If you have at any time been employed, give details.

| Designation of post held or Description of work | Period | | Full address of the Office, Firm or institution | Reasons for leaving the employment |
|---|---|---|---|---|
| | From (Date) | To (Date) | | |
| | | | | |

| | |
|---|---|
| 10. Have you furnished, in the form prescribed as per Appendix, in original, Character Certificates from two respectable persons unconnected with your College or University and not related to you, issued not more than 6 months prior to the date of this application. | |
| 11. (a) Have you ever been prosecuted, kept under detention or bound down/fined, convicted by a Court of Law for any offence.<br>(b) Is any case pending against you in any Court of Law at the time of filing this application?<br>(c) If the answer is yes for (a) and/or (b), full particulars of the case, detention, fine, conviction, sentence, stage of pendency, etc., should be given | (a)<br>(b)<br>(c) |
| 12. (a) Have you ever been dismissed/removed, terminated/compulsorily retired, from service or debarred from entry into Government Service?<br>(b) If the answer is 'yes', full particulars of the case, alongwith attested copies of relevant documents, should be given. If such treatment has been meted out as a measure of penalty for misconduct, etc, that should be specified. | (a)<br>(b) |

| | | |
|---|---|---|
| 13. | Whether the following documents are enclosed? Say yes or no, against each Item:<br>1) Attested copy of S.S.L.C. or equivalent examination certificate containing date of birth in proof of age. | |
| | 2) Attested copies of certificate in respect of the qualifications/ experience required for the post. (Please see Sections 10/16 of The Consumer Protection Act, 1986). | |
| 14. | If the applicant is an advocate, please give details of his/her relatives practising in the place, which would be his/her head quarters on appointment as President/Member. | |
| 15. | Present annual income of the Applicant from profession, trade, calling, employment, business, property rentals/lease, etc. Details to be furnished. | |
| 16. | Give details of your knowledge and/or experience/capacity in dealing with the problems relating to Economics, Law, Commerce, Accountancy, Industry, Public Affairs or Administration, (Please furnish attested copies of documents, if any) (please see Sections 10/16 of The Consumer Protection Act, 1986). | |

**N.B.:** "Attested Copy" means a photocopy of the relevant document, duly attested as "True Copy" by a Gazetted Officer of a State or Central Government or by a Notary Public.

**DECLARATION BY THE APPLICANT**

I, ______________________________ (Name) hereby declare that, the foregoing information is correct and complete, to the best of my knowledge and belief. I am not aware of any circumstances, which might impair my fitness for appointment.

2. I have read The Consumer Protection Act, 1986 (Central Act No. 68/1986) and the State and Central Rules, framed thereunder and I declare that I am eligible for appointment as *President/*Member of a *District Forum/*State Commision under the provisions of those statutes.

3. I am aware that the position I am seeking involves full-time employment, and I undertake to devote my full-time, if appointed as *President/*Member.

4. I do not and will not have any financial dealings or other interest, which is likely to affect prejudicially my functions as *President/*Member.

*5. I am an advocate practising in______________________ (indicate the place) and I shall give up practice, as long as I hold the office of President/Member, for which this application is being made.

* Strike out, if not applicable.

Place:
Date: **SIGNATURE OF THE APPLICANT**

**APPENDIX**

**CERTIFICATE OF CHARACTER**

Certified that I have known Sri/Smt______________________________ son/daughter/wife of Sri ______________________________ an applicant for the post of President/Member of the ______________________ District Consumer Disputes Redressal Forum/Karnataka State Consumer Disputes Redressal Commission, for the past ____________ years, ______________ months. The applicant has good, moral character and reputation and that after having read the provisions of Section 10/16 of the Consumer Protection Act,

1986 (Central Act 68 of 1986), I certify that the applicant has no antecedents, which render him/her unsuitable for appointment as such President/Member.

Sri/Smt ________________________________ (Name of the applicant) is not related to me.

PLACE: SIGNATURE WITH NAME IN CAPITALS;
DATE: FULL RESIDENTIAL AND OFFICIAL/PROFESSIONAL
PR-204 ADDRESS AND TEL. NO. OF RESIDENCE AND OFFICE.

## ಅಧಿಕೃತ ಅಧಿಕಾರಿ ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರ ನ್ಯಾಯಾಲಯ

## ನೋಟೀಸ್

**ಸಂಖ್ಯೆ: ಎ3:ಎಫ್‌ಒಸಿ:ಸಿಆರ್-116/2004-05 ದಿನಾಂಕ: 24ನೇ ಜನವರಿ 2005**

**ವಿಷಯ :** ಪರವಾನಿಗೆ ಇಲ್ಲದೆ ಶ್ರೀಗಂಧ ಸಾಗಾಣಿಕೆಯಲ್ಲಿ ಸಿಕ್ಕಿಬಿದ್ದ ಟಿವಿಎಸ್ ಮೊಪೆಡ್ ಸಂಖ್ಯೆ: ಕೆಎ-06-ಆರ್-7684ರ ಬಗ್ಗೆ.

**ಉಲ್ಲೇಖ :** ವಲಯ ಅರಣ್ಯಾಧಿಕಾರಿ, ನೆಲಮಂಗಲ ವಲಯ ಇವರ ಕಛೇರಿ ಅರಣ್ಯ ತಕ್ಷೀರು ಸಂಖ್ಯೆ: 14/03-04 ದಿನಾಂಕ: 1.10.2003.

ನೆಲಮಂಗಲ ಅರಣ್ಯ ವಲಯಕ್ಕೆ ಸೇರಿದ ಕೃಷ್ಣಾರಾಜಪುರ ಅರಣ್ಯದಲ್ಲಿ ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ಟಿವಿಎಸ್ ಮೊಪೆಡ್ ಸಂಖ್ಯೆ: ಕೆಎ-06-ಆರ್-7684 ಅನ್ನು ನೆಲಮಂಗಲ ಅರಣ್ಯ ಸಿಬ್ಬಂದಿ ಇಲಾಖಾ ವಶಕ್ಕೆ ತೆಗೆದುಕೊಂಡು ಮುಂದಿನ ಕ್ರಮಕ್ಕಾಗಿ ಈ ಕಛೇರಿಗೆ ಒಪ್ಪಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿಗಳು ನೆಲಮಂಗಲ ವಲಯರವರ ವರದಿಯನ್ನು ಪರಿಶೀಲಿಸಲಾಗಿ ಮೇಲ್ಕಂಡ ವಾಹನವು ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಈ ವಾಹನವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆಯಡಿ ಸೆಕ್ಷನ್ 71ಎ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವಾಗಿರುತ್ತದೆ.

ಮೇಲ್ಕಂಡ ವಾಹನವು ಶ್ರೀಗಂಧ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿಲ್ಲವೆಂಬ ಬಗ್ಗೆ ಅಹವಾಲು ಏನಾದರೂ ಇದ್ದರೆ ಸಂಬಂಧಪಟ್ಟ ಮಾಲೀಕರು ಈ ಪ್ರಕಟಣೆಯ ದಿನಾಂಕದಿಂದ 30 ದಿವಸಗಳೊಳಗಾಗಿ ಕೆಳಸಹಿದಾರರಿಗೆ ಖುದ್ದಾಗಿಯಾಗಲಿ ಅಥವಾ ವಕೀಲರ ಮೂಲಕವಾಗಲಿ ಅಹವಾಲನ್ನು ಸಲ್ಲಿಸುವುದು. ಇಲ್ಲವಾದಲ್ಲಿ ಕಾನೂನು ರೀತ್ಯ ಮುಂದಿನ ಕ್ರಮ ಜರುಗಿಸಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಎನ್. ಎಲ್. ಶಾಂತಕುಮಾರ್**
ಅಧಿಕೃತ ಅಧಿಕಾರಿ ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿ,
ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.

ಪಿ.ಆರ್.205

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಅಧಿಸೂಚನೆ ಸಂಖ್ಯೆಃ ಆಕುಕ 64 ಹೆಚ್‌ಎಸ್‌ಡಿ 2004 ಬೆಂಗಳೂರು, ದಿನಾಂಕಃ 18ನೇ ಡಿಸೆಂಬರ್ 2004**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ದಂತ ಆರೋಗ್ಯಾಧಿಕಾರಿಗಳ ವೃಂದದ ಜೇಷ್ಠತಾ ಪಟ್ಟಿಯನ್ನು ದಿನಾಂಕಃ1-4-2004 ರಲ್ಲಿದ್ದಂತೆ ತಯಾರಿಸಲು ಸರ್ಕಾರವು ತೀರ್ಮಾನಿಸಿದೆ. ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ) ನಿಯಮಾವಳಿ 1957 ರ ನಿಯಮ 10 ನ್ನು ಅನುಸರಿಸಿ ಸಂಬಂಧಿಸಿದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಮಾಹಿತಿಗಾಗಿ ಈ ಮೂಲಕ ಪ್ರಕಟಿಸಿದೆ.

ಈ ಅಧಿಸೂಚನೆಯ ಅನುಬಂಧದಲ್ಲಿರುವ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿರುವ ಸ್ಥಾನವನ್ನು ಒಪ್ಪಿಕೊಳ್ಳುವುದರಿಂದ ಬಾಧಿತರಾದ ಅಥವಾ ಒಪ್ಪಿಕೊಳ್ಳದ ಅಧಿಕಾರಿಗಳು ಈ ಸ್ಥಾನದಿಂದ ಬಾಧಿತರಾಗಿರುವುದಕ್ಕೆ ಅಥವಾ ಒಪ್ಪಿಕೊಳ್ಳದಿರುವುದಕ್ಕೆ ನಿರ್ದಿಷ್ಟ ಕಾರಣಗಳು ಮತ್ತು ಆಧಾರಗಳನ್ನೊಳಗೊಂಡ ಆಕ್ಷೇಪಣೆಗಳನ್ನು ದ್ವಿಪ್ರತಿಗಳಲ್ಲಿ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ತಲುಪುವಂತೆ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಮೂಲಕ ಸಲ್ಲಿಸಬಹುದು. ಒಂದು ಮುಂಗಡ ಪ್ರತಿಯನ್ನು ಕೆಳಗೆ ಸಹಿ ಮಾಡಿರುವವರಿಗೆ ನೇರವಾಗಿ ಕಳುಹಿಸಿ ಕೊಡುವುದು. ಈ ಜೇಷ್ಠತಾ ಪಟ್ಟಿಯಲ್ಲಿ ಕಾಣಿಸಿರುವ ಹೆಸರು, ದಿನಾಂಕ, ಸೇವಾ ವಿವರ, ಮುಂತಾದವುಗಳಲ್ಲಿ ನಿರ್ದಿಷ್ಟ ತಪ್ಪುಗಳು ಕಂಡು ಬಂದು ಅವುಗಳ ಬದಲಾವಣೆ ಅವಶ್ಯವಿದ್ದಲ್ಲಿ ನಿರ್ದಿಷ್ಟ ದಾಖಲೆಗಳೊಡನೆ ಇವುಗಳನ್ನು ಕೆಳಗೆ ಸಹಿ ಮಾಡಿರುವವರ ಗಮನಕ್ಕೆ ತರಬಹುದು.

ನಿರ್ದಿಷ್ಟ ಕಾರಣಗಳು, ದಾಖಲೆಗಳು, ಆಧಾರಗಳು ಇಲ್ಲದಿರುವ ಆಕ್ಷೇಪಣೆಗಳನ್ನು ಮತ್ತು ಅವಧಿ ಮೀರಿ ತಲುಪಿದ ಆಕ್ಷೇಪಣೆಗಳನ್ನು ಸರ್ಕಾರವು ಪರಿಗಣಿಸುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ.ಎಸ್.ಜಗದೀಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಅಧಿಸೂಚನೆ ಸಂಖ್ಯೆಃ ಆಕುಕ 64 ಹೆಚ್‌ಎಸ್‌ಡಿ 2004 ದಿನಾಂಕಃ 18-12-2004 ಕ್ಕೆ ಅನುಬಂಧ**

| ಕ್ರ.ಸಂ. | ದಂತ ಆರೋಗ್ಯಾಧಿಕಾರಿ ಹೆಸರು | ಹುಟ್ಟಿದ ದಿನಾಂಕ | ಕರ್ತವ್ಯಕ್ಕೆ ಸೇರಿದ ದಿನಾಂಕ | ಕರ್ತವ್ಯ ನಿರ್ವಹಿಸುತ್ತಿರುವ ದಿನಾಂಕ |
|---|---|---|---|---|
| 1 | ಡಾಃ ಎಸ್.ರುಕ್ಮಿಣಿ | 23-03-1962 | 27-10-1986 | 27-10-1986 |
| 2 | ಡಾಃ ಮಲ್ಲಿಕಾ | 12-04-1960 | 28-12-1986 | 28-12-1986 |
| 3 | ಡಾಃ ಕೆ.ಜಗದೀಶ್ | 06-10-1960 | 08-04-1993 | 08-04-1993 |
| 4 | ಡಾಃ ಸೋಮಶೇಖರಪ್ಪ | 14-05-1960 | 08-04-1993 | 08-04-1993 |
| 5 | ಡಾಃ ರವಿಕುಮಾರ್ | 01-05-1968 | 19-04-1993 | 19-04-1993 |
| 6 | ಡಾಃ ಪ್ರಶಾಂತ್ ಆರ್. | 18-02-1976 | 26-08-2000 | 26-08-2000 |
| 7 | ಡಾಃ ಸೌಮ್ಯ ಕೆ.ಎಸ್. | 20-07-1975 | 26-08-2000 | 26-08-2000 |
| 8 | ಡಾಃ ಜಗದೀಶ್ ಕೆ.ಎನ್. | 02-07-1975 | 26-08-2000 | 26-08-2000 |

| ಕ್ರ.ಸಂ. | ದಂತ ಆರೋಗ್ಯಾಧಿಕಾರಿ ಹೆಸರು | ಹುಟ್ಟಿದ ದಿನಾಂಕ | ಕರ್ತವ್ಯಕ್ಕೆ ಸೇರಿದ ದಿನಾಂಕ | ಕರ್ತವ್ಯ ನಿರ್ವಹಿಸುತ್ತಿರುವ ದಿನಾಂಕ |
|---|---|---|---|---|
| 9 | ಡಾಃ ಮಲ್ಲಯ್ಯ ಹಿರೇಮಠ್ | 01-07-1974 | 26-08-2000 | 26-08-2000 |
| 10 | ಡಾಃ ಕಿರಣ್ ಕುಮಾರ್ ಎನ್. | 15-08-1975 | 26-08-2000 | 26-08-2000 |
| 11 | ಡಾಃ ಗುರುಪ್ರಸಾದ್ ಸಿ.ಎನ್. | 24-05-1975 | 26-08-2000 | 26-08-2000 |
| 12 | ಡಾಃ ಸೌಮ್ಯ ಕೆ.ಆರ್. | 04-04-1975 | 26-08-2000 | 26-08-2000 |
| 13 | ಡಾಃ ಅಭಿಜಿತ್ | 15-04-1973 | 26-08-2000 | 26-08-2000 |
| 14 | ಡಾಃ ಸುಮನ್ ಬಿ. | 08-09-1974 | 26-08-2000 | 26-08-2000 |
| 15 | ಡಾಃ ಕವಿತಾ ರಘೋತ್ತಮ್ | 30-07-1975 | 26-08-2000 | 26-08-2000 |
| 16 | ಡಾಃ ನೈನಾ ವರ್ಣೇಕರ್ ಎನ್.ವಿ. | 22-07-1975 | 26-08-2000 | 26-08-2000 |
| 17 | ಡಾಃ ಆಶಾ ಕೋರಿ | 09-04-1973 | 26-08-2000 | 26-08-2000 |
| 18 | ಡಾಃ ಸಾವಿತ್ರಿ ಚೌಗಲೆ | 09-07-1974 | 26-08-2000 | 26-08-2000 |
| 19 | ಡಾಃ ಸೈಯಿದಾ ಶಬಾನಾ ಹುಸೈನ್ | 10-12-1974 | 26-08-2000 | 26-08-2000 |
| 20 | ಡಾಃ ಗುಣಶೀಲ ಬಿ. | 15-10-1975 | 26-08-2000 | 26-08-2000 |
| 21 | ಡಾಃ ನಮಿತಾ ಶಾನುಭೋಗ್ | 04-12-1971 | 26-08-2000 | 26-08-2000 |
| 22 | ಡಾಃ ಅಂಜುಮ ಅಫ್ಶಾನ್ | 08-06-1973 | 26-08-2000 | 26-08-2000 |
| 23 | ಡಾಃ ಪಠಾನ್ ಜೆಹ್ರಾ | 16-10-1975 | 26-08-2000 | 26-08-2000 |
| 24 | ಡಾಃ ಸವಿತಾ ಬಿ. ನಾಯ್ಕ | 26-04-1974 | 26-08-2000 | 26-08-2000 |
| 25 | ಡಾಃ ಸೀಮಾ ಮೆರ್ವಾಡಿ | 10-09-1975 | 26-08-2000 | 26-08-2000 |
| 26 | ಡಾಃ ರಮೇಶ್ ಎಲ್.ರಾಥೋಡ್ | 27-09-1973 | 26-08-2000 | 26-08-2000 |
| 27 | ಡಾಃ ಸುಧಾಕರ್ ಶೆಟ್ಟಿ | 01-06-1975 | 26-08-2000 | 26-08-2000 |
| 28 | ಡಾಃ ಕಟಕೋಳ ಬಿ.ಎಸ್. | 01-05-1975 | 26-08-2000 | 26-08-2000 |
| 29 | ಡಾಃ ಪ್ರತಿಭಾ ವಿ.ಜಿ. | 21-07-1974 | 26-08-2000 | 26-08-2000 |
| 30 | ಡಾಃ ವಿನುತಾ ಎಸ್. ಎಲಿಗಾರ್ | 13-12-1973 | 26-08-2000 | 26-08-2000 |
| 31 | ಡಾಃ ಇಂದ್ರಾಣಿ ಜಿ.ಎನ್. | 22-10-1969 | 26-08-2000 | 26-08-2000 |
| 32 | ಡಾಃ ಪೂರ್ಣಿಮಾ ಭಂಡಾರಿ | 01-06-1975 | 26-08-2000 | 26-08-2000 |
| 33 | ಡಾಃ ಉಮಾ ಎಸ್.ಆರ್. | 12-07-1974 | 26-08-2000 | 26-08-2000 |
| 34 | ಡಾಃ ಅನುಸೂಯಾ ಕಿವುದಾಸನ್ನವರ್ | 01-06-1974 | 26-08-2000 | 26-08-2000 |
| 35 | ಡಾಃ ಅನಾಲಿನಿ | 20-07-1975 | 26-08-2000 | 26-08-2000 |
| 36 | ಡಾಃ ವಿಜಯಲಕ್ಷ್ಮಿ ಎಂ.ಎನ್. | 01-06-1975 | 26-08-2000 | 26-08-2000 |
| 37 | ಡಾಃ ನಾಗರತ್ನ ಜೆ. | 08-07-1975 | 26-08-2000 | 26-08-2000 |
| 38 | ಡಾಃ ಪಿ.ಲೋಕೇಶ್ | 12-07-1975 | 26-08-2000 | 26-08-2000 |
| 39 | ಡಾಃ ವೀಣಾ ವಿಜಯ ಕೆ.ವಿ. | 15-08-1975 | 26-08-2000 | 26-08-2000 |
| 40 | ಡಾಃ ರೂಪಶ್ರೀ ಎಂ.ಎಸ್. | 19-11-1975 | 26-08-2000 | 26-08-2000 |
| 41 | ಡಾಃ ಪ್ರಗತಿ ಸಿ.ವಿನಾಯಕ | 22-12-1975 | 26-08-2000 | 26-08-2000 |
| 42 | ಡಾಃ ಸುಧಾ ಎಸ್.ಆರ್. | 06-07-1975 | 26-08-2000 | 26-08-2000 |
| 43 | ಡಾಃ ಯಶೋದಾ ಆರ್. | 25-03-1973 | 26-08-2000 | 26-08-2000 |
| 44 | ಡಾಃ ವೆಂಕಟೇಶ್ ಕೆ. | 16-11-1975 | 26-08-2000 | 26-08-2000 |
| 45 | ಡಾಃ ರೂಪಚಂದ್ರ ಮಾಲಾ | 10-09-1975 | 26-08-2000 | 26-08-2000 |
| 46 | ಡಾಃ ಶೋಭಾ ನಟರಾಜ್ | 16-04-1974 | 26-08-2000 | 26-08-2000 |
| 47 | ಡಾಃ ಮಂಜುನಾಥ ಡಿ.ವಿ. | 11-11-1975 | 26-08-2000 | 26-08-2000 |
| 48 | ಡಾಃ ಕಲಾವತಿ ಎಂ. | 30-11-1970 | 26-08-2000 | 26-08-2000 |
| 49 | ಡಾಃ ಚಂದ್ರಕಲಾ ಜೆ. | 05-05-1975 | 26-08-2000 | 26-08-2000 |
| 50 | ಡಾಃ ಸುರೇಶ್ ಟಿ. | 12-04-1979 | 26-08-2000 | 26-08-2000 |
| 51 | ಡಾಃ ನಫೀಸಾ ಬಿ. | 16-11-1968 | 26-08-2000 | 26-08-2000 |
| 52 | ಡಾಃ ರಘು ಹೆಚ್.ಹೆಚ್. | 13-02-1976 | 26-08-2000 | 26-08-2000 |
| 53 | ಡಾಃ ಕಲಾ ಜಿ. | 06-05-1973 | 26-08-2000 | 26-08-2000 |
| 54 | ಡಾಃ ಡಿಂಪಲ್ ಬಿ.ಎಂ. | 01-12-1974 | 26-08-2000 | 26-08-2000 |
| 55 | ಡಾಃ ಕಮಲಮ್ಮ | 17-11-1968 | 26-08-2000 | 26-08-2000 |
| 56 | ಡಾಃ ಗೀತಾಶ್ರೀ ಡಿ.ಎಂ. | 17-05-1976 | 26-08-2000 | 26-08-2000 |
| 57 | ಡಾಃ ತಿಪ್ಪೇಸ್ವಾಮಿ ಪಿ.ಎಂ. | 18-04-1967 | 26-08-2000 | 26-08-2000 |
| 58 | ಡಾಃ ಸತ್ಯಪ್ರಕಾಶ್ ಡಿ. | 18-07-1968 | 26-08-2000 | 26-08-2000 |
| 59 | ಡಾಃ ಶರತ್‌ಚಂದ್ರ | 29-08-1971 | 16-08-2002 | 16-08-2002 |

| ಕ್ರ.ಸಂ. | ದಂತ ಆರೋಗ್ಯಾಧಿಕಾರಿ ಹೆಸರು | ಹುಟ್ಟಿದ ದಿನಾಂಕ | ಕರ್ತವ್ಯಕ್ಕೆ ಸೇರಿದ ದಿನಾಂಕ | ಕರ್ತವ್ಯ ನಿರ್ವಹಿಸುತ್ತಿರುವ ದಿನಾಂಕ |
|---|---|---|---|---|
| 60 | ಡಾಃ ರಶ್ಮಿ ಎಸ್. | 30-04-1978 | 16-08-2002 | 16-08-2002 |
| 61 | ಡಾಃ ನಿತ್ಯಜ ಬಿ.ಜೆ. | 03-07-1977 | 16-08-2002 | 16-08-2002 |
| 62 | ಡಾಃ ಜ್ಯೋತಿ ಎಂ. | 14-11-1976 | 16-08-2002 | 16-08-2002 |
| 63 | ಡಾಃ ಸವಿತಾ ಕೆ.ಗೌಡರ್ | 08-04-1976 | 16-08-2002 | 16-08-2002 |
| 64 | ಡಾಃ ಮಧುಶ್ರೀ | 18-05-1976 | 16-08-2002 | 16-08-2002 |
| 65 | ಡಾಃ ಶರ್ಮಿಳಾ | 19-06-1976 | 16-08-2002 | 16-08-2002 |
| 66 | ಡಾಃ ವಿನೋದ್‌ಕುಮಾರ್ | 08-10-1977 | 16-08-2002 | 16-08-2002 |
| 67 | ಡಾಃ ವಿಶ್ವನಾಥ ಎಸ್.ಕೆ. | 16-10-1975 | 16-08-2002 | 16-08-2002 |
| 68 | ಡಾಃ ಗುರುರಾಜ ಎಸ್.ಕೆ. | 03-01-1978 | 16-08-2002 | 16-08-2002 |
| 69 | ಡಾಃ ಶರತ್‌ಚಂದ್ರ ಬಿ. | 19-01-1977 | 16-08-2002 | 16-08-2002 |
| 70 | ಡಾಃ ಸ್ಮಿತಾ ಎಸ್. | 06-07-1977 | 16-08-2002 | 16-08-2002 |
| 71 | ಡಾಃ ಅನುಪಮ ಎಸ್. | 14-12-1975 | 16-08-2002 | 16-08-2002 |
| 72 | ಡಾಃ ಅಂಬಿಕಾ ಜಿ. | 21-06-1975 | 16-08-2002 | 16-08-2002 |
| 73 | ಡಾಃ ಉಜ್ಮಾ ರಜ್ವಿ | 20-06-1975 | 16-08-2002 | 16-08-2002 |
| 74 | ಡಾಃ ರೋಶ್ನಿ | 30-07-1977 | 16-08-2002 | 16-08-2002 |
| 75 | ಡಾಃ ಚಿತ್ಕಲಾ ಯು.ಪಾಟೀಲ್ | 08-09-1977 | 16-08-2002 | 16-08-2002 |
| 76 | ಡಾಃ ಅಂಜಲಿ ಕೃಷ್ಣಯ್ಯ | 25-08-1972 | 16-08-2002 | 16-08-2002 |
| 77 | ಡಾಃ ಸಿ.ಹೆಚ್.ಹೇಮಲತಾ | 22-05-1976 | 16-08-2002 | 16-08-2002 |
| 78 | ಡಾಃ ರಾಜಲಕ್ಷ್ಮಿ ನಾಯರ್ | 19-04-1978 | 16-08-2002 | 16-08-2002 |
| 79 | ಡಾಃ ಚೇತನ ಬಣಕಾರ್ | 21-02-1975 | 16-08-2002 | 16-08-2002 |
| 80 | ಡಾಃ ಚಂಪಕ ಜಿ.ರಾವ್ | 11-04-1977 | 16-08-2002 | 16-08-2002 |
| 81 | ಡಾಃ ಮಂಜುಳ ಕೆ.ವಿ. | 22-07-1976 | 16-08-2002 | 16-08-2002 |
| 82 | ಡಾಃ ಶೈಲಜ ಕೆ.ಎಸ್. | 02-02-1976 | 16-08-2002 | 16-08-2002 |
| 83 | ಡಾಃ ತೇಜೇಶ್ ಕುಮಾರ್ ಎಸ್.ಪಿ. | 23-09-1975 | 16-08-2002 | 16-08-2002 |
| 84 | ಡಾಃ ಹೆಚ್.ಬಿ.ಅನ್ನಪೂರ್ಣ | 22-11-1972 | 16-08-2002 | 16-08-2002 |
| 85 | ಡಾಃ ಜೋತ್ಸ್ನ ಸುಜಯ ಜತ್ತಣ್ಣ | 24-06-1975 | 16-08-2002 | 16-08-2002 |
| 86 | ಡಾಃ ಮಹೀನಾ ಅಮೀನ ಬೇಗ್ | 29-08-1974 | 16-08-2002 | 16-08-2002 |
| 87 | ಡಾಃ ಶಿಲ್ಪಶ್ರೀ ಡಿ. | 25-03-1976 | 16-08-2002 | 16-08-2002 |
| 88 | ಡಾಃ ತಸ್ನೀಮಾ ಫಿರ್ದೋಸ್ | 27-12-1975 | 16-08-2002 | 16-08-2002 |
| 89 | ಡಾಃ ಜ್ಞಾನ ಕುಮಾರ್ | 09-05-1977 | 16-08-2002 | 16-08-2002 |
| 90 | ಡಾಃ ಪ್ರತಿಭಾ ವಿ.ಪಾಸ್ತೆ | 07-08-1975 | 16-08-2002 | 16-08-2002 |
| 91 | ಡಾಃ ಹೇಮನಾಥ್ ಬಿ.ಪಿ. | 06-03-1975 | 16-08-2002 | 16-08-2002 |
| 92 | ಡಾಃ ಕಲ್ಪನಾ ಎಂ.ಎಸ್. | 27-09-1975 | 16-08-2002 | 16-08-2002 |
| 93 | ಡಾಃ ಉಷಾ ಹೆಚ್. | 07-08-1970 | 16-08-2002 | 16-08-2002 |
| 94 | ಡಾಃ ಕಾವೇರಿ ಹಳಿಯಾಳ್ | 19-03-1978 | 16-08-2002 | 16-08-2002 |
| 95 | ಡಾಃಲವೀನಾ ಜನ್ನೀಸ್ ನೊರೋನ್ಹಾ | 12-05-1977 | 16-08-2002 | 16-08-2002 |
| 96 | ಡಾಃ ಅರುಣಾನಂದ ಹೆಚ್.ಆರ್. | 03-03-1977 | 16-08-2002 | 16-08-2002 |
| 97 | ಡಾಃ ತೇಜಸ್ವಿನಿ ಎಸ್.ರೇವಣ್‌ಕರ್ | 21-10-1976 | 16-08-2002 | 16-08-2002 |
| 98 | ಡಾಃ ಎಂ.ಮಾಲಿನಿ | 08-12-1971 | 16-08-2002 | 16-08-2002 |
| 99 | ಡಾಃ ಪ್ರಸಾದ್ ಎಂ.ಜಿ.ಎಸ್. | 04-07-1976 | 16-08-2002 | 16-08-2002 |
| 100 | ಡಾಃ ನರೇಂದ್ರನ್ ಡಿ. | 22-12-1976 | 16-08-2002 | 16-08-2002 |
| 101 | ಡಾಃ ವೀಣಾ ನಾರಾಯಣ ಶಿರೂರು | 09-07-1974 | 16-08-2002 | 16-08-2002 |
| 102 | ಡಾಃ ಅನುರಾಧಾ ಎಸ್.ನಾಯಕ್ | 21-05-1976 | 16-08-2002 | 16-08-2002 |
| 103 | ಡಾಃ ಗಂಗಾಧರಯ್ಯ | 01-10-1975 | 16-08-2002 | 16-08-2002 |
| 104 | ಡಾಃ ಸಂಗೀತಾ ಉದಯಗಿರಿ | 01-06-1977 | 21-10-2002 | 21-10-2002 |
| 105 | ಡಾಃ ವಿಶಾಲಾಕ್ಷಿ | 13-01-1977 | 03-12-2002 | 03-12-2002 |
| 106 | ಡಾಃ ವೆಂಕಟೇಶ್ ಎಸ್.ಟಿ. | 20-02-1976 | 03-12-2002 | 03-12-2002 |
| 107 | ಡಾಃ ಅರ್ಚನ ಎಂ.ಜೆ. | 18-01-1977 | 03-12-2002 | 03-12-2002 |
| 108 | ಡಾಃ ಗಾಯತ್ರಿ ಹೆಚ್.ಸಿ. | 30-10-1976 | 03-12-2002 | 03-12-2002 |
| 109 | ಡಾಃ ಸತೀಶ್ ಎಂ.ಸಿ. | 12-06-1976 | 03-12-2002 | 03-12-2002 |
| 110 | ಡಾಃ ಎಂ.ಸಿಂಧು | 29-11-1975 | 03-12-2002 | 03-12-2002 |

| ಕ್ರ.ಸಂ. | ದಂತ ಆರೋಗ್ಯಾಧಿಕಾರಿ ಹೆಸರು | ಹುಟ್ಟಿದ ದಿನಾಂಕ | ಕರ್ತವ್ಯಕ್ಕೆ ಸೇರಿದ ದಿನಾಂಕ | ಕರ್ತವ್ಯ ನಿರ್ವಹಿಸುತ್ತಿರುವ ದಿನಾಂಕ |
|---|---|---|---|---|
| 111 | ಡಾಃ ಸಂಧ್ಯಾ ರಾಮರಾವ್ ಡಾಂಗೆ | 05-04-1978 | 03-12-2002 | 03-12-2002 |
| 112 | ಡಾಃ ಸಮೀನಾ ಕೌಸರ್ ಹುಸ್ಸೈನ್ | 30-05-1977 | 03-12-2002 | 03-12-2002 |
| 113 | ಡಾಃ ಪ್ರದೀಪ್ ಪೂಜಾರಿ | 24-06-1975 | 03-12-2002 | 03-12-2002 |
| 114 | ಡಾಃ ಪರಮೇಶ್ ಪಿ. | 20-07-1973 | 03-12-2002 | 03-12-2002 |
| 115 | ಡಾಃ ಉದಯ | 01-03-1972 | 03-12-2002 | 03-12-2002 |
| 116 | ಡಾಃ ಮಂಜುನಾಥ ಮೆಸ್ತ | 15-01-1975 | 11-02-2003 | 11-02-2003 |
| 117 | ಡಾಃ ಬೀಸು ನಾಯ್ಕ | 01-06-1974 | 11-02-2003 | 11-02-2003 |
| 118 | ಡಾಃ ಶಿವ ಮಲ್ಲೇಶ್ ಎಂ. | 19-02-1973 | 11-02-2003 | 11-02-2003 |
| 119 | ಡಾಃ ಸಿಂಗಾಡಿ ಮಾಯಪ್ಪ ಕರಗಾಂವೆ | 01-06-1973 | 11-02-2003 | 11-02-2003 |
| 120 | ಡಾಃ ಪ್ರೇಮ್‌ಕುಮಾರ್ ಡಿ.ಆರ್. | 06-01-1977 | 11-02-2003 | 11-02-2003 |
| 121 | ಡಾಃ ಅರುಣ್‌ಕುಮಾರ್ ಸಿ. | 13-06-1977 | 11-02-2003 | 11-02-2003 |
| 122 | ಡಾಃ ಜಯನಾಥ್ | 06-03-1976 | 11-02-2003 | 11-02-2003 |
| 123 | ಡಾಃ ಸುರೇಶ್ ಕೆ.ಎಸ್. | 12-05-1977 | 11-02-2003 | 11-02-2003 |
| 124 | ಡಾಃ ಲಕ್ಷ್ಮಣ | 15-07-1973 | 11-02-2003 | 11-02-2003 |
| 125 | ಡಾಃ ಮಮತ ಟಿ. | 10-08-1975 | 13-05-2003 | 13-05-2003 |
| 126 | ಡಾಃ ವೀಣಾ | 26-06-1977 | 04-07-2003 | 04-07-2003 |

PR-55

ಸಿ.ಎಸ್.ಜಗದೀಶಯ್ಯ

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**OFFICE OF THE COMMERCIAL TAX OFFICER, III CIRCLE, TUMKUR,**
**No.CTO:III:TMK:T.No:04-05 dated: 13th December 2004**

**Sub:** Loss of Receipts Book bearing Sl.No.0636339 to 0636350 in duplicate.

It is brought to the notice all those concerned that this office has issued receipt book bearing Sl.No.0636339 to 0636350 to Smt. G. Parvathamma, Commercial Tax Inspector of this office and she has reported that they have lost receipts book bearing leaves Sl.No.0636339 to 0636350 in duplicate.

The above said receipts book will not have any value, as the undersigned has declared the said Receipts as absolete. If any body finds the above Receipts Book may surrender the same to the Commercial Tax Officer, III Circle, Tumkur, the details are as follows.

**FORMAT**

| | | | |
|---|---|---|---|
| 1. | Assessing Authority | : | Commercial Tax Officer, III Circle, Tumkur. |
| 2. | Description of Forms | : | K.S.T. Receipt Book |
| 3. | Sl. No. of receipt book | : | Book No. 012727<br>Sl.No.0636339 to 0636350 in duplicate |
| 4. | To whom the receipts book issued | : | Smt. G. Parvathamma, Commercial Tax Inspector, O/o the Commercial Tax Officer, III Circle, Tumkur. |
| 5. | Date of report of loss received in the office of the assessing authority | : | 04.12.2001. |
| 6. | How lost/ Theft/ Destruction or in transit | : | While on duty at Turuvekere |

PR-206

Commercial Tax Officer, III Circle, Tumkur.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರ ತಾಲ್ಲೂಕು, ಕೋಟೆಕೊಪ್ಪ ಗ್ರಾಮದಲ್ಲಿ ಮಲ್ಟಿಕಲರ್ ಶಿಲೆಗಾಗಿ ಶ್ರೀ ಎಸ್. ರುದ್ರಪ್ಪ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 370ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:370:2003-04/926 ದಿನಾಂಕ: 30.10.2003.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ:ಉನಿಕ: ಕಗಗು:370:2004-05:6915 ದಿನಾಂಕ: 27.08.2004.

**ಪ್ರಸ್ತಾವನೆ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕೋಟೆಕೊಪ್ಪ ಗ್ರಾಮದ ಸರ್ವೆ ನಂ. 9 ರಲ್ಲಿ ಶ್ರೀ ಎಸ್. ರುದ್ರಪ್ಪರವರಿಗೆ 5.00 ಎಕರೆಗೆ ದಿನಾಂಕ: 28.8.2000 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿಸಿರುವ ಕಛೇರಿ ಪತ್ರದಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2004ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,40,301/-ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟಿಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯ ಮೇಲಿನ ಬಾಕಿ ಪಾವತಿಸದೇಯಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂಆರ್‌ಸಿ 92 ದಿನಾಂಕ: 2.7.1994ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:370:2003-04/15832 ದಿನಾಂಕ:31ನೇ ಜನವರಿ 2005**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಕೋಟೆಕೊಪ್ಪ ಗ್ರಾಮದ ಸರ್ವೆ ನಂ. 9 ರಲ್ಲಿ 5.00 ಎಕರೆಗೆ ಮಲ್ಟಿಕಲರ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 370 ನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್.213

ನಿರ್ದೇಶಕರು,

ಗಣಿ ಮತ್ತು ಭೂವಿಜ್ಞಾನ ಇಲಾಖೆ ಬೆಂಗಳೂರು.

## ಸಾರಿಗೆ ಇಲಾಖೆ

## ಸಾರಿಗೆ ಆಯುಕ್ತರ ಕಛೇರಿ, 5ನೇ ಮಹಡಿ, ಬಹುಮಹಡಿ ಕಟ್ಟಡ, ಬೆಂಗಳೂರು-560001

## ಅಧಿಸೂಚನೆ

### ಸಂಖ್ಯೆ: ಸಾಆ:ಇಎನ್ಎಫ್:1:ಪಿಆರ್:81:2001-02 ದಿನಾಂಕ: 19ನೇ ಜನವರಿ 2005

ಕರ್ನಾಟಕ ಮೋಟಾರು ವಾಹನಗಳ ನಿಯಾಮಾವಳಿ 1989ರ ನಿಯಮ 231-ಬಿ ಯ ಉಪನಿಯಮ (8)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಮತ್ತು ಅಧಿಸೂಚನೆ ಸಂಖ್ಯೆ: ಸಿಟಿ/ಇಎನ್ಎಫ್ 11/ಪಿಆರ್:81/2001-02 ದಿನಾಂಕ: 21.07.2001ನ್ನು ರದ್ದುಗೊಳಿಸಿ ಈ ಅಧಿಸೂಚನೆಯ ಅನುಬಂಧ-Iರ ಪ್ರಕಾರ ಪೆಟ್ರೋಲ್/ಸಿ.ಎನ್.ಜಿ/ಎಲ್.ಪಿ.ಜಿ.ಯಿಂದ ನಡೆಸಲ್ಪಡುವ ಮೋಟಾರು ವಾಹನಗಳಿಗೆ ಮತ್ತು ಈ ಅಧಿಸೂಚನೆಯ ಅನುಬಂಧ-II ರ ಪ್ರಕಾರ ಡೀಸೆಲ್‌ನಿಂದ ನಡೆಸಲ್ಪಡುವ ಮೋಟಾರು ವಾಹನಗಳಿಗೆ, ಕೇಂದ್ರ ಮೋಟಾರು ವಾಹನ ನಿಯಮಾವಳಿ 1989ರ ನಿಯಮ 115ರ ಪ್ರಕಾರ ನಿಗದಿಪಡಿಸಿದ ಮಾನದಂಡದ ಅನುಗುಣವಾಗಿ ಮತ್ತು ಈ ಕೆಳಗೆ ಸೂಚಿಸಿರುವ ನಿಬಂಧನೆಗಳ ಪ್ರಕಾರ ಸೂಕ್ತ ಪರೀಕ್ಷೆ ನಡೆಸಿ ಪ್ರಮಾಣ ಪತ್ರ ನೀಡಲು ಮೋಟಾರು ವಾಹನ ನಿಯಮಾವಳಿ 1989ರ ನಿಯಮ 231-ಬಿ ಪ್ರಕಾರ ಲೈಸನ್ಸ್ ಹೊಂದಿದ ವಾಯು ಮಾಲಿನ್ಯ ಪರೀಕ್ಷಾ ಕೇಂದ್ರಗಳಿಗೆ ಅಧಿಕಾರ ಪತ್ರವನ್ನು ಸಾರಿಗೆ ಆಯುಕ್ತರು ನೀಡಿದ್ದಾರೆ.

1. ಕೇಂದ್ರ ಮೋಟಾರು ವಾಹನಗಳ ನಿಯಮಾವಳಿ 1989ರ ನಿಯಮ 115(7)ರಂತೆ ಕಾಲಕಾಲಕ್ಕೆ ತಿದ್ದುಪಡಿಯಾದ ಪ್ರಕಾರ ಪ್ರಮಾಣ ಪತ್ರದ ಚಾಲ್ತಿಯನ್ನು ನಮೂದಿಸಿ ಕೊಡುವುದು.
2. ಪ್ರಮಾಣ ಪತ್ರವನ್ನು ಅನುಕ್ರಮ ಸಂಖ್ಯೆಯ ಪ್ರಕಾರ ದ್ವಿಪ್ರತಿಯಲ್ಲಿ ತಯಾರಿಸತಕ್ಕದ್ದು.
3. ಲೈಸನ್ಸಿಂಗ್ ಪ್ರಾಧಿಕಾರವು ಅಧಿಕೃತವಾಗಿ ತನ್ನ ಮುದ್ರೆಯನ್ನು ಒತ್ತಿ ಅಧಿಕಾರ ನೀಡದ ಹೊರತು ಪ್ರಮಾಣ ಪತ್ರವನ್ನು ಕೊಡತಕ್ಕದ್ದಲ್ಲ.
4. ಪ್ರಮಾಣಪತ್ರ ನೀಡಿದ ದಿನಾಂಕದಿಂದ ಎರಡು ವರ್ಷಗಳವರೆಗೆ ಪ್ರಮಾಣ ಪತ್ರಗಳ ದ್ವಿಪತ್ರಿಯನ್ನು ಸುರಕ್ಷಿತವಾಗಿ ಇಟ್ಟುಕೊಳ್ಳತಕ್ಕದ್ದು ಮತ್ತು ಲೈಸನ್ಸಿಂಗ್ ಪ್ರಾಧಿಕಾರ ಅಥವಾ ಲೈಸನ್ಸಿಂಗ್ ಪ್ರಾಧಿಕಾರದಿಂದ ಅಧಿಕಾರ ನೀಡಲ್ಪಟ್ಟ ವ್ಯಕ್ತಿಯು ಪರೀಕ್ಷೆ ಮಾಡಲು ಯಾವಾಗ ಕೇಳಿದರೂ ಹಾಜರುಪಡಿಸತಕ್ಕದ್ದು.
5. ಪ್ರಮಾಣ ಪತ್ರವನ್ನು ಲೈಸನ್ಸ್ ಹೊಂದಿದವನು ತಾನೇ ಸಹಿ ಮಾಡತಕ್ಕದ್ದು. ಒಂದು ವೇಳೆ ಬೇರೆ ಯಾರಾದರೂ ಪ್ರಮಾಣ ಪತ್ರ ಸಹಿ ಮಾಡಲು ಅಧಿಕಾರ ಹೊಂದಬೇಕಾದರೆ ಆ ವ್ಯಕ್ತಿಯ ಹೆಸರು, ವಿಳಾಸ ಮತ್ತು ಮಾದರಿ ಸಹಿಯನ್ನು ಸಲ್ಲಿಸಿ ಲೈಸೆನ್ಸ್ ಪ್ರಾಧಿಕಾರದಿಂದ ಪೂರ್ವಾನುಮತಿ ಪಡೆಯತಕ್ಕದ್ದು.
6. ಪ್ರಮಾಣ ಪತ್ರದ ಬಣ್ಣವು ಈ ಕೆಳಕಂಡಂತೆ ಇರತಕ್ಕದ್ದು.
   (ಅ) ಪೆಟ್ರೋಲ್/ಎಲ್.ಪಿ.ಜಿ/ಸಿ.ಎನ್.ಜಿ. ವಾಹನಗಳಿಗೆ - ತಿಳಿ ಹಸಿರು ಬಣ್ಣ
   (ಆ) ಡೀಸೆಲ್ ವಾಹನಗಳಿಗೆ - ತಿಳಿ ನೀಲಿ ಬಣ್ಣ

**ಓಂ ಪ್ರಕಾಶ್**
ಸಾರಿಗೆ ಆಯುಕ್ತರು, ಬೆಂಗಳೂರು.

## OFFICE OF THE COMMISSIONER FOR TRANSPORT IN KARNATAKA, BANGALORE-560 001

## NOTIFICATION

### No.CT/ENF-1/PR-81/2001-02 Dated: 19th January 2005

In exercise of the Powers conferred under Sub-Rule (8) of Rule 231-B of Karnataka Motor Vehicles Rules 1989 and in supersession of the Notification No. CT/ENF-II/PR-81/2001-02 dated 21.07.2001, the Commissioner for Transport hereby authorises the Emission Testing Centres duly licensed under Rule 231-B of the Karnataka Motor Vehicles Rules 1989 to issue certificate as prescribed in Annexure-I to this Notification for petrol/CNG/LPG driven motor vehicles and as prescribed in Annexure-II to this Notification for diesel driven Motor Vehicles complying with the standards prescribed under Rule 115 of the Central Motor Vehicles Rules, 1989, after necessary test conducted by them, subject to the following conditions:

1. The velidity of the certificate shall be as prescribed under Rule 115 (7) of Central Motor Vehicles Rules 1989 as amended from time to time.
2. The certificates shall be serially numbered and shall be prepared in duplicate.
3. No certificate shall be issued unless it is officially authorized for use duly affixing thereon the seal of the Licensing Authority.
4. The duplicate copies of the certificates shall be retained for a period of at least two years from the date of issue and shall be produced for inspection whenever required by the Licensing Authority or any other person authorized by the Licensing Authority.
5. The certificates shall be signed by the Licence holder himself. In case any other person is to be authorized to sign the certificates, prior approval of the Licensing Authority shall be obtained, after providing the name, address and the specimen signatures of the person to be so authorised.
6. The colour of the certificate shall be:
   a) In respect of petrol/LPG/CNG vehicles : In light green colour.
   b) In respect of diesel vehicles : In light blue colour.

**OM PRAKASH**
Commissioner for Transport, Bangalore.

## ANNEXURE - I

ಕ್ರಮ ಸಂಖ್ಯೆ / Serial No.

ವಾಯು ಮಾಲಿನ್ಯ ಪರೀಕ್ಷಣಾ ಪ್ರಮಾಣ ಪತ್ರ

**EMISSION TEST CERTIFICATE**

(Rule 231 (B)(8) of KMV Rule's1989)

Name & address of ETC :

**Licence No:**

TRANSPORT DEPARTMENT SEAL
ಸಾರಿಗೆ ಇಲಾಖೆ ಮೊಹರು

Type of Vehicle: Fuel /ಇಂಧನ :
ವಾಹನದ ಮಾದರಿ:

ಕಂಪ್ಯೂಟರ್ ನಂ/I.D.NO : Type of Engine :
Vehicle No: ಯಂತ್ರದ ಮಾದರಿ :
ವಾಹನ ಸಂಖ್ಯೆ : Make/ತಯಾರಿಕ: Date/ದಿನಾಂಕ :
Month & Year of Mfg: Model/ಮಾದರಿ: Time/ ಸಮಯ :
ತಯಾರಾದ ವರ್ಷ ಮತ್ತು ತಿಂಗಳು:
ಮೀಟರ್ ರೀಡಿಂಗ್/Odo Reading : Category/ ವರ್ಗ:
ಹೊಗೆಯ ಪ್ರಮಾಣ/Test Result: Photo of vehicle:

| | Prescribed Std | Measured Level | Unit |
|---|---|---|---|
| CO | | | % Vol |
| HC | | | ppm |

ಈ ವಾಹನವು ಕೇಂದ್ರ ಮೋಟಾರು ವಾಹನ ನಿಯಮಾವಳಿ 1989 ರ ನಿಯಮ 115 (2) ರಲ್ಲಿ ನಿಗದಿಪಡಿಸಿದ ಹೊಗೆ ಹೊರಸೂಸುವ ಪ್ರಮಾಣಕ್ಕೆ ಅನುಗುಣವಾಗಿತ್ತದೆ.

Valid up to/ ಅವಧಿ:

This vehicle meets Emission Standards Prescribed under Rule 115(2) of central Motor Vehicle Rules'1989.

Testing Station Code:
ಪರೀಕ್ಷಾ ಕೇಂದ್ರದ ಸಂಕೇತ:

ಅಧಿಕೃತ ಸಹಿ

ಪರೀಕ್ಷಣಾ ಕೇಂದ್ರದ ಮೊಹರು/Seal of Testing Station Authorised Signatory

## ANNEXURE-II

ವಾಯು ಮಾಲಿನ್ಯ ಪರೀಕ್ಷಣಾ ಪ್ರಮಾಣ ಪತ್ರ

**EMISSION TEST CERTIFICATE**

(Rule 231 (B)(8) of KMV Rules'1989)

**Name & address of ETC :**

**Licence No:**

TRANSPORT DEPARTMENT SEAL
**ಸಾರಿಗೆ ಇಲಾಖೆ ಮೊಹರು**

**Standard Fixed**

| | HARTRIDGE Units | K (Light Absorption Co-efficient) |
|---|---|---|
| Free Acceleration | 65 | 2.45 |

ಕ್ರಮ ಸಂಖ್ಯೆ : ತಯಾರಿಕ :
Serial.No : Make :

Test Result

ಕಂಪ್ಯೂಟರ್ ನಂ: ಮಾದರಿ :
Computer I.D.NO: Model :
ಮೋಟಾರು ವಾಹನ ಸಂಖ್ಯೆ : ತಯಾರಾದ ತಿಂಗಳು ಮತ್ತು ವರ್ಷ:
Motor Vehicle No. : Month & Year of Mfg :
ವಾಹನದ ಬಗೆ :
Vehicle Type : Photo of vehicle
ಪರೀಕ್ಷಿಸಿದ ದಿನಾಂಕ : ಸಮಯ :
Date of test : Time :
ಚಾಲ್ತಿಯ ಅವಧಿ :
Valid up to :

ಈ ವಾಹನವು ಕೇಂದ್ರ ಮೋಟಾರು ವಾಹನ ನಿಯಮಾವಳಿ 1989 ನಿಯಮ 115 (2) ರಲ್ಲಿ ನಿಗದಿಪಡಿಸಿದ ಹೊಗೆ ಹೊರಸೂಸುವ ಮಟ್ಟಕ್ಕೆ ಅನುಗುಣವಾಗಿರುತ್ತದೆ.

ಪರೀಕ್ಷಾ ಕೇಂದ್ರದ ಸಂಕೇತ:
Testing Station Code :

This vehicle meets Emission Standards Prescribed under Rule 115 (2) of Central Motor Vehicle Rules'1989.

ಪರೀಕ್ಷಣಾ ಕೇಂದ್ರದ ಮೊಹರು ಅಧಿಕೃತ ಸಹಿದಾರರು
Seal of Testing Station Authorised Signatory.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ

**ನಂ. ಡಿಆರ್ಎಸ್:ಸಮಾಪನೆ:ಡಿಎಲ್ಎಸ್:1603:1983-84:1646 ದಿನಾಂಕ: 22ನೇ ಜನವರಿ 2005**

**ವಿಷಯ :** ಸಮಾಪನಾ ಆದೇಶಿತ ವಿಜಯ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ಬಾಳೆಕೊಪ್ಪ ಶಿಕಾರಿಪುರ ತಾ: ಇದರ ನೋಂದಣಿ ರದ್ಧತಿ ಕುರಿತು.

**ಉಲ್ಲೇಖ :**
1. ಈ ಕಛೇರಿಯ ಆದೇಶ ನಂ. ಡಿಆರ್ಎಸ್:ಸಮಾಪನೆ:1603:83-84/ ದಿನಾಂಕ: 12.8.1983.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಪತ್ರ ನಂ: ಎಆರ್25:ಸಮಾಪನೆ:ರದ್ಧತಿ:ಸಿಆರ್-176/ 2003-04 ದಿನಾಂಕ: 26.03.2004.
3. ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ನಡುವಳಿಗಳು ನಂ. ಆರ್ಸಿಎಸ್/ಎಲ್ಕ್ಯೂಡಿ/47/2002-03 ದಿನಾಂಕ: 27.12.2004.

ವಿಜಯ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ಬಾಳೆಕೊಪ್ಪ ಶಿಕಾರಿಪುರ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಾರ್ಯಾಲಯದ ನೋಂದಣಿ ನಂ. ಎಆರ್ಎಸ್/329/1967-68 ದಿನಾಂಕ: 10.04.1968 ರಲ್ಲಿ ನೋಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಕ್ಷೇತ್ರಾಧಿಕಾರಿ ಶಿವಮೊಗ್ಗ ಡಿಸಿಸಿ ಬ್ಯಾಂಕ್ ಶಿಕಾರಿಪುರ ಶಾಖೆ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ: 1.9.1983 ರಂದು ಪ್ರಭಾರ ವಹಿಸಿಕೊಂಡು ಚರಾಸ್ತಿಯನ್ನು ವಿಲೇ ಮಾಡಿ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಇರುವ ಸರ್ಕಾರದ ಸಾಲ ರೂ.2,620 ಹಾಗೂ ಬಡ್ಡಿ ರೂ.3,460 ಹೀಗೆ ಒಟ್ಟು ರೂ.6,080-00 ಗಳನ್ನು ಉಲ್ಲೇಖ(3)ರ ಆದೇಶದಲ್ಲಿ ಸಹಕಾರ ಸಂಘಗಳ ನಿಬಂಧಕರು ಬೆಂಗಳೂರು ಇವರು ಮನ್ನಾ ಮಾಡಿದ್ದು, ಮತ್ತು ಸ್ಥಿರಾಸ್ಥಿ ಇಲ್ಲವೆಂದು ವರದಿ ಮಾಡಿ ದಿನಾಂಕ: 15.3.2004 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಾಗರ ಉಪ-ವಿಭಾಗದ ಸಹಾಯಕ ನಿಬಂಧಕರು, ಉಲ್ಲೇಖ(2)ರ ಪತ್ರದಲ್ಲಿ ನೋಂದಣಿ ರದ್ಧತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಸಾಗರ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಉಲ್ಲೇಖ (2) ರಲ್ಲಿಯ ಶಿಫಾರಸ್ಸು ಅನ್ವಯ ಮತ್ತು ಉಲ್ಲೇಖ (3)ರ ಆದೇಶದಲ್ಲಿ ಸರ್ಕಾರದ ಸಾಲ ಮನ್ನಾ ಮಾಡಿರುವ ಪ್ರಯುಕ್ತ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯೂ/69/ಸಿಎಲ್ಎಂ/2000 ದಿನಾಂಕ: 21.11.2001ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ವಿಜಯ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ಬಾಳೆಕೊಪ್ಪ, ಶಿಕಾರಿಪುರ ತಾಲ್ಲೂಕು ಇದರ ನೋಂದಣಿ ನಂ. ಎಆರ್ಎಸ್:329:1967-68 ದಿನಾಂಕ: 10.04.1968ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ, ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 22ನೇ ಜನವರಿ 2005 ರಂದು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಪಿ.ಆರ್.211 ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಕಾಅಗ:ಕಾನಪ:ಎಫ್:5/05/798 ದಿನಾಂಕ: 13ನೇ ಜನವರಿ 2005**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು: |
|---|---|---|
| 1. ಶ್ರೀಮತಿ ಹಣಮವ್ವ w/o ಹೆಬ್ಬಾಳಪ್ಪ ಕಿತ್ತೂರ R/o ಅರಹುಣಸೆ ತಾ: ರೋಣ ಜಿಲ್ಲೆ ಗದಗ | | 1. ಶ್ರೀ ಟಿ. ಗಂಗೇಶ, (ಟೇಬಲ್ ಬ್ರಿಕ್ಸ್) R/o ಬೀರೇಶ್ವರ ಟೇಬಲ್ ಬ್ರಿಕ್ಸ್ ಭೀಮನ ಕುಪ್ಪಾ ಕ್ರಾಸ್ ಕೆಂಗೇರಿ ಹೋಬಳಿ, ದೊಡ್ಡ ಆಲದಮರ ರಸ್ತೆ, ರಾಮೋಹಳ್ಳಿ ದಕ್ಷಿಣ, ಬೆಂಗಳೂರು-560 060 |
| 2. ಶ್ರೀ ಹೆಬ್ಬಾಳಪ್ಪ S/o ದ್ಯಾವಪ್ಪ ಕಿತ್ತೂರ R/o ಅರೆಹುಣಸೆ ತಾ: ರೋಣ ಜಿ: ಗದಗ | | 2. ಶ್ರೀಮತಿ ಸುಮಾ w/o ಬಸವರಾಜ ಕಿತ್ತೂರ R/o ಕುರಹಟ್ಟಿ ತಾ: ರೋಣ ಜಿಲ್ಲೆ: ಗದಗ |

**ಪ್ರಕಟಣೆ:**

ಅರ್ಜಿದಾರರಾದ ಶ್ರೀಮತಿ: ಹಣಮವ್ವಾ w/o ಹೆಬ್ಬಾಳೆಪ್ಪ ಕಿತ್ತೂರ ಹಾಗೂ ಹೆಬ್ಬಾಳಪ್ಪ ದ್ಯಾವಪ್ಪ ಕಿತ್ತೂರ ಕಿತ್ತೂರ ಇವರು, ತಾವು ಮೃತ ಬಸವರಾಜ ಹೇ ಕಿತ್ತೂರ ಇವರ ತಾಯಿ ಮತ್ತು ತಂದೆ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಸವರಾಜ ಇವರು ಒಂದನೇ ಪ್ರತಿವಾದಿಗಳಾದ ಟಿ. ಗಂಗೇಶ ಇವರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ಆಶ್ರಿತರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ

ಪಿ.ಆರ್.214 ಗದಗ ಜಿಲ್ಲೆ ಗದಗ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ,**

**2ನೇ ವಲಯ, 8ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-03 ಇವರ ನಡವಳಿಕೆಗಳು**

**ಕ್ರಮ ಸಂಖ್ಯೆ: ಎಆರ್‌ಬಿ 45/ದಾವಾ/ಮಾ.ಸ್ಥಿ-13/2004-05, ದಿನಾಂಕ: 8ನೇ ಫೆಬ್ರವರಿ 2005**

**ವಿಷಯ:** ಶ್ರೀ ಎ. ಕೇಶವಮೂರ್ತಿ ಬಿನ್ ಆರ್. ಅಶ್ವಥನಾರಾಯಣ, ನಂ.25, 4ನೇ ಮುಖ್ಯ ರಸ್ತೆ, 7ನೇ 'ಎ' ಅಡ್ಡರಸ್ತೆ, ವಿಜಯನಗರ 2ನೇ ಹಂತ, ಬೆಂಗಳೂರು-560 040, ಇವರ ಸ್ಥಿರ ಸ್ವತ್ತನ್ನು ದಿನಾಂಕ: 14.09.2004 ರಂದು ನಡೆದ ಬಹಿರಂಗ ಹರಾಜಿನಲ್ಲಿ ಶ್ರೀ ಬಿ.ಎಸ್. ಜ್ಞಾನಪ್ರಕಾಶ್, ಬಿನ್ ಶ್ರೀ ಎ.ಬಿ. ಸಿದ್ದಗಂಗಯ್ಯ ನವರು ಖರೀದಿಸಿದ ಬಗ್ಗೆ ಮಾರಾಟವನ್ನು ಸ್ಥಿರೀಕರಿಸುವ ಬಗ್ಗೆ.

**ಉಲ್ಲೇಖ:**
1) ಅವಾರ್ಡ್ ನಂ. ಜೆಆರ್‌ಬಿ-2/ಡಿಎಸ್/6882/02-03, ದಿನಾಂಕ: 19.12.2003.
2) ಅಮಲ್ಜಾರಿ ಅರ್ಜಿ ಸಂಖ್ಯೆ: ಎಆರ್‌ಬಿ II (45) ಸಿಇಪಿ/5413/2003-04.
3) ವ್ಯವಸ್ಥಾಪಕರು, ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ಲಿ., ವಿಜಯನಗರ ಶಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: 2207(ಎ)04-05 ದಿನಾಂಕ: 25.01.2005.
4) ಸಹಕಾರ ಅಭಿವೃದ್ಧಿ ಅಧಿಕಾರಿ ಹಾಗೂ ಮಾರಾಟಾಧಿಕಾರಿ, ನಿಯಮ 441 ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ಲಿ., ಬೆಂಗಳೂರು ರವರ ವರದಿ ದಿನಾಂಕ: 27.01.2005.

**ಪ್ರಸ್ತಾವನೆ:**

ಶ್ರೀ ಎ. ಕೇಶವಮೂರ್ತಿ, ಬಿನ್ ಶ್ರೀ ಆರ್. ಅಶ್ವಥನಾರಾಯಣ, ನಂ.25, 4ನೇ ಮುಖ್ಯರಸ್ತೆ, 7ನೇ 'ಎ' ಅಡ್ಡರಸ್ತೆ, ಆರ್.ಪಿ.ಸಿ. ಬಡಾವಣೆ, ವಿಜಯನಗರ 2ನೇ ಹಂತ, ಬೆಂಗಳೂರು-560 040, ಇವರು ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್, ವಿಜಯನಗರ ಶಾಖೆ, ಬೆಂಗಳೂರು-560 040 ಈ ಬ್ಯಾಂಕಿನ ಸದಸ್ಯರಾಗಿದ್ದು, ಕೈ ಸಾಲ ತೀರಿಸುವ ಉದ್ದೇಶಕ್ಕಾಗಿ ದಿನಾಂಕ: 21.03.2002 ರಂದು ರೂ.4,50,000-00 ಗಳನ್ನು ಸಾಲವಾಗಿ ಪಡೆದು, ಸದರಿ ಸಾಲಕ್ಕೆ ಶ್ರೀ ಎ. ಕೇಶವಮೂರ್ತಿ ರವರಿಗೆ ಸೇರಿದ ಆಸ್ತಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು ಕಸಬ ಹೋಬಳಿ, ಅರಶಿನಕುಂಟೆ ಗ್ರಾಮದ ಸರ್ವೆ ನಂ.65/2 ಖಾತೆ ನಂ.295/50, ನಿವೇಶನ ಸಂಖ್ಯೆ: 50 ವಿಸ್ತೀರ್ಣ ಪೂರ್ವ - ಪಶ್ಚಿಮ 40 ಅಡಿಗಳು, ಉತ್ತರ-ದಕ್ಷಿಣ 45.9+45.6/2 ಅಡಿ ಅಳತೆಯುಳ್ಳ ನಿವೇಶನವನ್ನು ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕಿಗೆ ಆಧಾರ ಮಾಡಿಕೊಟ್ಟಿರುತ್ತಾರೆ. ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಬಂಧನೆಗಳ ಪ್ರಕಾರ ಸಾಲಗಾರರಾದ ಶ್ರೀ ಎ. ಕೇಶವಮೂರ್ತಿ, ಬಿನ್ ಶ್ರೀ ಆರ್. ಅಶ್ವಥನಾರಾಯಣ, ಎಂಬುವವರು ಬ್ಯಾಂಕಿನ ಸಾಲದ ಹಣವನ್ನು ಮರುಪಾವತಿಸದ ಪ್ರಯುಕ್ತ ವ್ಯವಸ್ಥಾಪಕರು, ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ಲಿ., ವಿಜಯನಗರ ಶಾಖೆ, ಬೆಂಗಳೂರು ರವರು ಉಲ್ಲೇಖ (1) ರಲ್ಲಿ ನಮೂದಿಸಿರುವ ಆದೇಶದ ಮೂಲಕ ಡಿಕ್ರಿಯನ್ನು ಪಡೆದು ಉಲ್ಲೇಖ (2) ರಲ್ಲಿ ನಮೂದಿಸಿರುವ ಈ ಕಛೇರಿಯ ಹುಕುಂ ಅನ್ವಯ ಅಮಲ್ಜಾರಿ ಆಗಿರುತ್ತದೆ. ಸದರಿ ಆದೇಶಗಳ ಮೇರೆಗೆ ಸಹಕಾರ ಅಭಿವೃದ್ಧಿ ಅಧಿಕಾರಿ ಹಾಗೂ ಮಾರಾಟಾಧಿಕಾರಿ, ನಿಯಮ 441, ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ಲಿ., ಬೆಂಗಳೂರು ರವರು ಶ್ರೀ ಎ. ಕೇಶವಮೂರ್ತಿ, ಬಿನ್ ಶ್ರೀ ಆರ್. ಅಶ್ವಥನಾರಾಯಣ, ಎಂಬುವವರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರ ಸ್ವತ್ತನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 89 ಮತ್ತು ನಿಯಮಗಳು 1960 ನಿಯಮ 38 ರನ್ವಯ ದಿನಾಂಕ: 14-09-2004 ರಂದು ಬಹಿರಂಗ ಹರಾಜು ಮೂಲಕ ಶ್ರೀ ಬಿ.ಎಸ್. ಜ್ಞಾನಪ್ರಕಾಶ್ ಬಿನ್ ಶ್ರೀ ಎ.ಬಿ. ಸಿದ್ದಗಂಗಯ್ಯ ನಂ.2017, 12ನೇ 'ಎ' ಅಡ್ಡರಸ್ತೆ, 1ನೇ 'ಬಿ' ಮುಖ್ಯರಸ್ತೆ, ವಿಜಯನಗರ 2ನೇ ಹಂತ, ಬೆಂಗಳೂರು-40 ಇವರಿಗೆ ರೂ.1,45,000-00 ಗಳಿಗೆ (ಒಂದು ಲಕ್ಷ ನಲವತ್ತೈದು ಸಾವಿರ ರೂಪಾಯಿಗಳು ಮಾತ್ರ) ಮಾರಾಟ ಮಾಡಿರುತ್ತಾರೆ. ಮಾರಾಟದ ಹಣವು ಸರ್ಕಾರವು ಆಸ್ತಿಯ ಬೆಲೆಯನ್ನು ನಿಗದಿಪಡಿಸಿರುವ ಬೆಲೆಗಿಂತ ಹೆಚ್ಚಾಗಿರುತ್ತದೆ. ಆಸ್ತಿಯನ್ನು ಖರೀದಿಸಿದ ಶ್ರೀ ಬಿ.ಎಸ್. ಜ್ಞಾನಪ್ರಕಾಶ್ ರವರು ಹರಾಜಿನ ಪೂರ್ಣ ಹಣವನ್ನು ನಿಗದಿತ ಅವಧಿಯೊಳಗೆ ಬ್ಯಾಂಕಿಗೆ ಜಮಾ ಮಾಡಿರುವುದಾಗಿ ಮಾರಾಟಾಧಿಕಾರಿಯವರು ಉಲ್ಲೇಖ (3) ರಂತೆ ಈ ಕಛೇರಿಗೆ ವರದಿ ಮಾಡಿ ಸ್ಥಿರಸ್ವತ್ತು ಖರೀದಿದಾರರಾದ ಶ್ರೀ ಬಿ.ಎಸ್. ಜ್ಞಾನಪ್ರಕಾಶ್ ರವರ ಹೆಸರಿಗೆ ಮಾರಾಟ ದೃಢೀಕರಣ ಮಾಡಿ ಪ್ರಮಾಣ ಪತ್ರ ನೀಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರೀ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಎಂ.ಡಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ಆದ ನಾನು ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್‌ಎಂ 2001 ದಿನಾಂಕ: 21.11.2001 ರನ್ವಯ ಪ್ರತ್ಯಾಯೋಜನೆಯಾದ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 89ಎ ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಎ. ಕೇಶವಮೂರ್ತಿ ರವರಿಗೆ ಸೇರಿದ ಆಸ್ತಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಕಸಬ ಹೋಬಳಿ, ಅರಿಶಿನಕುಂಟೆ ಗ್ರಾಮದ ಸರ್ವೆ ನಂ.65/2, ಖಾತೆ ಸಂಖ್ಯೆ: 295/50 ನಿವೇಶನ ಸಂಖ್ಯೆ 50, ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಆದೇಶ ಕ್ರಮ ಸಂಖ್ಯೆ: ಬಿ.ಡಿ.ಎಸ್./ಎ.ಎಲ್.ಎನ್.ಎಸ್.ಆರ್. 150/91-92 ದಿನಾಂಕ: 05.12.1991 ರಂತೆ ಭೂ ಪರಿವರ್ತನೆಯಾಗಿರುವ ಜಮೀನಿನಲ್ಲಿ ವಿಂಗಡಿಸಿರುವ ನಿವೇಶನದ ವಿಸ್ತೀರ್ಣ ಪೂರ್ವ - ಪಶ್ಚಿಮ 40 ಅಡಿಗಳು, ಉತ್ತರ-ದಕ್ಷಿಣ 45.9+45.6/2 ಅಡಿಗಳು, ಪೂರ್ವಕ್ಕೆ - ನಿವೇಶನ ಸಂಖ್ಯೆ 43, ಪಶ್ಚಿಮಕ್ಕೆ - ರಸ್ತೆ, ಉತ್ತರಕ್ಕೆ ನಿವೇಶನ ಸಂಖ್ಯೆ 49, ದಕ್ಷಿಣಕ್ಕೆ ಖಾಸಗಿ ಸ್ವತ್ತಿನ ಸಂಖ್ಯೆ ಈ ಮಧ್ಯೆ ಇರುವ ಆಸ್ತಿಯನ್ನು ಮಾರಾಟಾಧಿಕಾರಿಯವರು ದಿನಾಂಕ: 14.09.2004 ರಂದು ನಡೆಸಿದ ಬಹಿರಂಗ ಹರಾಜಿನಲ್ಲಿ ಶ್ರೀ ಬಿ.ಎಸ್. ಜ್ಞಾನಪ್ರಕಾಶ್ ರವರಿಗೆ ರೂ.1,45,000-00 ಗಳಿಗೆ (ಒಂದು ಲಕ್ಷ ನಲವತ್ತೈದು ಸಾವಿರಗಳು ಮಾತ್ರ) ಮಾರಾಟ ಮಾಡಿದ್ದು, ಶ್ರೀ ಬಿ.ಎಸ್. ಜ್ಞಾನಪ್ರಕಾಶ್ ರವರು ಮಾರಾಟದ ಪೂರ್ಣ ಹಣವನ್ನು ನಿಗದಿತ ಅವಧಿಯೊಳಗೆ ಡಿಕ್ರಿದಾರ ಬ್ಯಾಂಕಿಗೆ ಪಾವತಿಸಿರುವ ಪ್ರಯುಕ್ತ ಮಾರಾಟಾಧಿಕಾರಿಯವರು ದಿನಾಂಕ: 14.09.2004 ರಂದು ಬಹಿರಂಗ ಹರಾಜು ಮೂಲಕ ಮಾರಾಟ ಮಾಡಿರುವ ಸ್ವತ್ತನ್ನು ಶ್ರೀ ಬಿ.ಎಸ್. ಜ್ಞಾನಪ್ರಕಾಶ್ ಬಿನ್ ಎ.ಬಿ. ಸಿದ್ದಗಂಗಯ್ಯ ರವರ ಹೆಸರಿಗೆ ಮಾರಾಟವನ್ನು ದೃಢೀಕರಿಸಿ ಖಾಯಂಗೊಳಿಸಲಾಗಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 08.02.2005 ರಂದು ಹೊರಡಿಸಲಾಗಿದೆ.

ಪಿ.ಆರ್. 388

ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ,
## 2ನೇ ವಲಯ, 8ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-03 ಇವರ ನಡವಳಿಕೆಗಳು

**ಕ್ರಮ ಸಂಖ್ಯೆ: ಎಆರ್‌ಬಿ 45/ದಾವಾ/ಮಾ.ಸ್ಥಿ-14/2004-05, ದಿನಾಂಕ: 8ನೇ ಫೆಬ್ರವರಿ 2005**

**ವಿಷಯ:** ಶ್ರೀ ಎ. ಕೇಶವಮೂರ್ತಿ ಬಿನ್ ಆರ್. ಅಶ್ವಥನಾರಾಯಣ, ನಂ.25, 4ನೇ ಮುಖ್ಯ ರಸ್ತೆ, 7ನೇ 'ಎ' ಅಡ್ಡರಸ್ತೆ, ವಿಜಯನಗರ 2ನೇ ಹಂತ, ಬೆಂಗಳೂರು-560 040, ಇವರ ಸ್ಥಿರ ಸ್ವತ್ತನ್ನು ದಿನಾಂಕ: 14.09.2004 ರಂದು ನಡೆದ ಬಹಿರಂಗ ಹರಾಜಿನಲ್ಲಿ ಶ್ರೀ ಎ.ಬಿ. ಸಿದ್ದಗಂಗಯ್ಯ ಬಿನ್ ಲೇಟ್ ಎಂ. ಭೈರಪ್ಪ ನವರು ಖರೀದಿಸಿದ ಬಗ್ಗೆ ಮಾರಾಟವನ್ನು ಸ್ಥಿರೀಕರಿಸುವ ಬಗ್ಗೆ.

**ಉಲ್ಲೇಖ:**
1) ಅವಾರ್ಡ್ ನಂ. ಜೆಆರ್‌ಬಿ-2/ಡಿಎಸ್/6882/02-03, ದಿನಾಂಕ: 19.12.2003.
2) ಅಮಲ್ಜಾರಿ ಅರ್ಜಿ ಸಂಖ್ಯೆ: ಎಆರ್‌ಬಿ II (45) ಸಿಇಪಿ/5413/2003-04.
3) ವ್ಯವಸ್ಥಾಪಕರು, ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ಲಿ., ವಿಜಯನಗರ ಶಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: 2207(ಎ)04-05 ದಿನಾಂಕ: 25.01.2005.
4) ಸಹಕಾರ ಅಭಿವೃದ್ಧಿ ಅಧಿಕಾರಿ ಹಾಗೂ ಮಾರಾಟಾಧಿಕಾರಿ, ನಿಯಮ 441 ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ಲಿ., ಬೆಂಗಳೂರು ರವರ ವರದಿ ದಿನಾಂಕ: 27.01.2005.

**ಪ್ರಸ್ತಾವನೆ:**

ಶ್ರೀ ಕೇಶವಮೂರ್ತಿ, ಬಿನ್ ಶ್ರೀ ಆರ್. ಅಶ್ವಥನಾರಾಯಣ, ನಂ.25, 4ನೇ ಮುಖ್ಯರಸ್ತೆ, 7ನೇ 'ಎ' ಅಡ್ಡರಸ್ತೆ, ಆರ್.ಪಿ.ಸಿ. ಬಡಾವಣೆ, ವಿಜಯನಗರ 2ನೇ ಹಂತ, ಬೆಂಗಳೂರು-560 040, ಇವರು ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ವಿಜಯನಗರ ಶಾಖೆ, ಬೆಂಗಳೂರು-560 040 ಈ ಬ್ಯಾಂಕಿನ ಸದಸ್ಯರಾಗಿದ್ದು, ಕೈ ಸಾಲ ತೀರಿಸುವ ಉದ್ದೇಶಕ್ಕಾಗಿ ದಿನಾಂಕ: 21.03.2002 ರಂದು ರೂ.4,50,000-00 ಗಳನ್ನು ಸಾಲವಾಗಿ ಪಡೆದು, ಸದರಿ ಸಾಲಕ್ಕೆ ಶ್ರೀ ಎ. ಕೇಶವಮೂರ್ತಿ ರವರಿಗೆ ಸೇರಿದ ಆಸ್ತಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು ಕಸಬ ಹೋಬಳಿ, ಅರಿಶಿನಕುಂಟೆ ಗ್ರಾಮದ ಖಾನೇಷುಮಾರಿ ನಂ.295/24 (ಎರಡುನೂರ ತೊಂಬತ್ತೈದು ಸ್ಲೈಟ್ ನಂ. ಇಪ್ಪತ್ನಾಲ್ಕು) ವಿಸ್ತೀರ್ಣ ಪೂರ್ವ-ಪಶ್ಚಿಮ 45.9+47.7/2 ಅಡಿಗಳು ಉತ್ತರ-ದಕ್ಷಿಣ 30 ಅಡಿಗಳು ಅಳತೆಯುಳ್ಳ ನಿವೇಶನವನ್ನು ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕಿಗೆ ಆಧಾರ ಮಾಡಿಕೊಟ್ಟಿರುತ್ತಾರೆ. ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಬಂಧನೆಗಳ ಪ್ರಕಾರ ಸಾಲಗಾರರಾದ ಶ್ರೀ ಎ. ಕೇಶವಮೂರ್ತಿ, ಬಿನ್ ಶ್ರೀ ಆರ್. ಅಶ್ವಥನಾರಾಯಣ, ಎಂಬುವವರು ಬ್ಯಾಂಕಿನಿಂದ ಪಡೆದ ಸಾಲದ ಹಣವನ್ನು ಮರುಪಾವತಿಸದ ಪ್ರಯುಕ್ತ ವ್ಯವಸ್ಥಾಪಕರು, ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ಲಿ., ವಿಜಯನಗರ ಶಾಖೆ, ಬೆಂಗಳೂರು ರವರು ಉಲ್ಲೇಖ (1) ರಲ್ಲಿ ನಮೂದಿಸಿರುವ ಆದೇಶದ ಮೂಲಕ ಡಿಕ್ರಿಯನ್ನು ಪಡೆದು ಉಲ್ಲೇಖ (2) ರಲ್ಲಿ ನಮೂದಿಸಿರುವ ಈ ಕಛೇರಿಯ ಹುಕುಂ ಅನ್ವಯ ಅಮಲ್ಜಾರಿ ಪಡೆದಿರುತ್ತಾರೆ. ಸದರಿ ಆದೇಶಗಳ ಮೇರೆಗೆ ಸಹಕಾರ ಅಭಿವೃದ್ಧಿ ಅಧಿಕಾರಿ ಹಾಗೂ ಮಾರಾಟಾಧಿಕಾರಿ, ನಿಯಮ 441, ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ಲಿ., ಬೆಂಗಳೂರು ರವರು ಶ್ರೀ ಎ. ಕೇಶವಮೂರ್ತಿ, ಬಿನ್ ಶ್ರೀ ಆರ್. ಅಶ್ವಥನಾರಾಯಣ, ಎಂಬುವವರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರ ಸ್ವತ್ತನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 89 ಮತ್ತು ನಿಯಮಗಳು 1960 ನಿಯಮ 38 ರನ್ವಯ ದಿನಾಂಕ: 14-09-2004 ರಂದು ಬಹಿರಂಗ ಹರಾಜು ಮೂಲಕ ಶ್ರೀ ಎ.ಬಿ. ಸಿದ್ದಗಂಗಯ್ಯ ಬಿನ್ ಲೇಟ್ ಎಂ. ಭೈರಪ್ಪ, ನಂ.2017, 12ನೇ 'ಎ' ಅಡ್ಡರಸ್ತೆ, 1ನೇ 'ಬಿ' ಮುಖ್ಯರಸ್ತೆ, ವಿಜಯನಗರ 2ನೇ ಹಂತ, ಬೆಂಗಳೂರು-40 ಇವರಿಗೆ ರೂ.1,31,000-00 ಗಳಿಗೆ (ಒಂದು ಲಕ್ಷ ಮೂವತ್ತೊಂದು ಸಾವಿರ ರೂಪಾಯಿಗಳು ಮಾತ್ರ) ಮಾರಾಟ ಮಾಡಿರುತ್ತಾರೆ. ಮಾರಾಟದ ಹಣವು ಸರ್ಕಾರವು ಆಸ್ತಿಯ ಬೆಲೆಯನ್ನು ನಿಗದಿಪಡಿಸಿರುವ ಬೆಲೆಗಿಂತ ಹೆಚ್ಚಾಗಿರುತ್ತದೆ. ಆಸ್ತಿಯನ್ನು ಖರೀದಿಸಿದ ಶ್ರೀ ಎ.ಬಿ. ಸಿದ್ದಗಂಗಯ್ಯ ರವರು ಹರಾಜಿನ ಪೂರ್ಣ ಹಣವನ್ನು ನಿಗದಿತ ಅವಧಿಯೊಳಗೆ ಬ್ಯಾಂಕಿಗೆ ಜಮಾ ಮಾಡಿರುವುದಾಗಿ ಮಾರಾಟಾಧಿಕಾರಿಯವರು ಉಲ್ಲೇಖ (4) ರಂತೆ ಈ ಕಛೇರಿಗೆ ವರದಿ ಮಾಡಿ ಸ್ಥಿರಸ್ವತ್ತು ಖರೀದಿದಾರರಾದ ಶ್ರೀ ಎ.ಬಿ. ಸಿದ್ದಗಂಗಯ್ಯನವರ ಹೆಸರಿಗೆ ಮಾರಾಟ ದೃಢೀಕರಣ ಮಾಡಿ ಪ್ರಮಾಣ ಪತ್ರ ನೀಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರೀ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

ಎಂ.ಡಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ಆದ ನಾನು ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್‌ಎಂ 2001 ದಿನಾಂಕ: 21.11.2001 ರನ್ವಯ ಪ್ರತ್ಯಾಯೋಜನೆಯಾದ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 89ಎ ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಎ. ಕೇಶವಮೂರ್ತಿ ಬಿನ್ ಆರ್. ಅಶ್ವಥನಾರಾಯಣ ರವರಿಗೆ ಸೇರಿದ ಆಸ್ತಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಕಸಬ ಹೋಬಳಿ, ಅರಿಶಿನಕುಂಟೆ ಗ್ರಾಮದ ಖಾನೇಷುಮಾರಿ ನಂ.295/24 (ಎರಡುನೂರ ತೊಂಬತ್ತೈದು ಸ್ಲೈಟ್ ನಂ. ಇಪ್ಪತ್ನಾಲ್ಕು) : ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಆದೇಶ ಕ್ರಮ ಸಂಖ್ಯೆ: ಬಿ.ಡಿ.ಎಸ್./ಎ.ಎಲ್.ಎನ್.ಎಸ್.ಆರ್. 150/91-92 ದಿನಾಂಕ: 05.12.1991 ರಂದು ಭೂ ಪರಿವರ್ತನೆಯಾಗಿರುವ ಜಮೀನಿನಲ್ಲಿ ವಿಂಗಡಿಸಿರುವ ನಿವೇಶನದ ವಿಸ್ತೀರ್ಣ ಪೂರ್ವ - ಪಶ್ಚಿಮ 45.9+47.7/2 ಅಡಿಗಳು, ಉತ್ತರ-ದಕ್ಷಿಣ 30 ಅಡಿಗಳು, ಪೂರ್ವಕ್ಕೆ ರಸ್ತೆ, ಪಶ್ಚಿಮಕ್ಕೆ 30ನೇ ನಂಬರಿನ ನಿವೇಶನ, ಉತ್ತರಕ್ಕೆ 23ನೇ ನಂಬರಿನ ನಿವೇಶನ, ದಕ್ಷಿಣಕ್ಕೆ 25ನೇ ನಂಬರಿನ ನಿವೇಶನ ಮಧ್ಯೆ ಇರುವ 24ನೇ ನಂಬರಿನ ಆಸ್ತಿಯನ್ನು ಮಾರಾಟಾಧಿಕಾರಿಯವರು ದಿನಾಂಕ: 14.09.2004 ರಂದು ನಡೆಸಿದ ಬಹಿರಂಗ ಹರಾಜಿನಲ್ಲಿ ಶ್ರೀ ಎ.ಬಿ. ಸಿದ್ದಗಂಗಯ್ಯ ಬಿನ್ ಲೇಟ್ ಶ್ರೀ ಎಂ. ಭೈರಪ್ಪ ರವರಿಗೆ ರೂ.1,31,000-00 ಗಳಿಗೆ (ಒಂದು ಲಕ್ಷ ಮೂವತ್ತೊಂದು ಸಾವಿರಗಳು ಮಾತ್ರ) ಮಾರಾಟ ಮಾಡಿದ್ದು, ಶ್ರೀ ಎ.ಬಿ. ಸಿದ್ದಗಂಗಯ್ಯ ರವರು ಮಾರಾಟದ ಪೂರ್ಣ ಹಣವನ್ನು ನಿಗದಿತ ಅವಧಿಯೊಳಗೆ ಡಿಕ್ರಿದಾರ ಬ್ಯಾಂಕಿಗೆ ಪಾವತಿಸಿರುವ ಪ್ರಯುಕ್ತ ಮಾರಾಟಾಧಿಕಾರಿಯವರು ದಿನಾಂಕ: 14.09.2004 ರಂದು ಬಹಿರಂಗ ಹರಾಜು ಮೂಲಕ ಮಾರಾಟ ಮಾಡಿರುವ ಸ್ವತ್ತನ್ನು ಶ್ರೀ ಎ.ಬಿ. ಸಿದ್ದಗಂಗಯ್ಯ ಬಿನ್ ಲೇಟ್ ಎಂ. ಭೈರಪ್ಪ ರವರ ಹೆಸರಿಗೆ ಮಾರಾಟವನ್ನು ದೃಢೀಕರಿಸಿ ಖಾಯಂಗೊಳಿಸಲಾಗಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 08.02.2005 ರಂದು ಹೊರಡಿಸಲಾಗಿದೆ.

ಪಿ.ಆರ್. 389 ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು.

**FORM NO.155**
**(See Rule 329)**
**MEMBER'S VOLUNTARY WINDING-UP**

Name of the Company: **JAKNUR JAGGERY LIMITED**

**NOTICE CONVENING FINAL MEETING**

NOTICE is hereby given in pursuance of Section 497 that a General Meeting of the members of the above named company will be held at Manoj Arcade, Guruwar Peth, Tilakwadi, Belgaum on Monday the 2nd May, 2005, at 3 p.m. for the purpose of having an account laid before them showing the manner in which the winding-up has been conducted and the property of the company disposed of and of hearing any explanation that may be given by the liquidator and also of determining by a special resolution of the Company the manner in which the books, accounts and documents of the company and of the liquidator shall be disposed of.

Dated this 21st day of February, 2005.

**M.K. SHEVADE,** Liquidator
P.D. 14 Manoj Arcade, Guruwar Peth, Tilakwadi, Belgaum-590006.

**ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರ ನ್ಯಾಯಾಲಯದಲ್ಲಿ**

**ದಾವಾ ಸಂಖ್ಯೆ: ಡಿಆರ್‌ಬಿ/2/ಡಿ/791/2004-2005**

| ವಾದಿ | ವಿರುದ್ಧ | ಪ್ರತಿವಾದಿಗಳು |
|---|---|---|
| ಕಾರ್ಯದರ್ಶಿ,<br>ಶ್ರೀ ಲಕ್ಷ್ಮೀ ಪತ್ತಿನ ಸಹಕಾರ ಸಂಘ ನಿ.,<br>ನಂ.257/7, 1ನೇ ಮಹಡಿ, 9ನೇ ಮೈನ್,<br>ಸಂಪಂಗಿರಾಮನಗರ, ಬೆಂಗಳೂರು-27. | | 1) ಶ್ರೀ ಕೆ. ತಿರುಮಲೇಶ್, ಅಧ್ಯಕ್ಷರು<br>2) ಶ್ರೀಮತಿ ಸಂಧ್ಯಾ ಕೆ.ರಾವ್, ಶ್ರೀ ಲಕ್ಷ್ಮೀ ಪತ್ತಿನ ಸಹಕಾರ ಸಂಘ ನಿಯಮಿತ, ನಂ.257/7, 1ನೇ ಮಹಡಿ, 9ನೇ ಮೈನ್, ಸಂಪಂಗಿರಾಮನಗರ, ಬೆಂಗಳೂರು-27. |

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ಪ್ರಕಾರ ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡುವ ಬಗ್ಗೆ ನೋಟೀಸ್**

ವಾದಿಯು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70 ರನ್ವಯ ಈ ನ್ಯಾಯಾಲಯದಿಂದ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.2,35,234-00 ಗಳನ್ನು ದಿನಾಂಕ: 16.02.2005 ರಿಂದ ಸಾಲಿಯಾನ ಶೇಕಡ 21 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ದಾವಾ ಅರ್ಜಿಯನ್ನು ಮೇಲ್ಕಂಡ ಸಂಖ್ಯೆಯಲ್ಲಿ ನೋಂದಾಯಿಸಿಕೊಂಡು ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment Before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಗಳು ಅವರ ಹೆಸರಿನಲ್ಲಿರುವ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು / ಪರಭಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್ / ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್ / ಡಿಕ್ರಿ ಅನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ವಸೂಲಿ ಮಾಡಲು ಯಾವುದೇ ರಹವಿಲ್ಲದೆ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಗಳನ್ನು ಮತ್ತು ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯಲ್ಲಿ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೆ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ/ಪರಭಾರೆ ಮಾಡದಂತೆ ತಡೆಹಿಡಿಯದೇ ಇದ್ದಲ್ಲಿ ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್/ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆಯ ಕ್ರಮ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಸಿ.ಎನ್. ರುದ್ರಪ್ಪ, ಸಹಕಾರ ಸಂಘಗಳ ಉಪನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ಆದ ನಾನು ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್ ನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.2,35,234-00 ಗಳನ್ನು ವಾದಿ ಸಂಘದಲ್ಲಿ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ: 11.03.2005 ರಂದು 3.00 ಗಂಟೆಯೊಳಗಾಗಿ ಅಧಿಕೃತ ಚಲನ್/ರಸೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸ್ ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

### 1ನೇ ಪ್ರತಿವಾದಿಯ ಷೆಡ್ಯೂಲ್ ಸ್ವತ್ತಿನ ವಿವರ

1) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ ಎಫ್ ಕೋಡು (ಪಿ.ಪಿ.12) ಖುಷ್ಕಿ ಒಂದು ಎಕರೆ ಮತ್ತು ಇದೇ ಸರ್ವೆ ನಂ.52ನೇ ಹೆಚ್ ಕೋಡು (ಪಿ.ಪಿ.14) ಖುಷ್ಕಿ 4 ಎಕರೆ ಎರಡು ತಾಕು ಜಮೀನು ಒಟ್ಟು 5 ಎಕರೆ ಖುಷ್ಕಿ.

**ಜಮೀನಿಗೆ ಚಕ್ಕುಬಂದಿ**

ಪೂರ್ವಕ್ಕೆ ... ಶ್ರೀಮತಿ ಸಂಧ್ಯಾ ರವರ ಸದರಿ ಸರ್ವೆ ನಂಬರಿನ ಜಮೀನು.
ಪಶ್ಚಿಮಕ್ಕೆ ... ಸದರಿ ಸರ್ವೆ ನಂಬರಿನಲ್ಲಿರುವ ಖರೀದಿದಾರರಾದ ತಿರುಮಲ್ಲೇಶ್‌ರವರ ಜಮೀನು.
ಉತ್ತರಕ್ಕೆ ... ಸರ್ಕಾರಿ ತೊರೆ ಹಳ್ಳ ಮತ್ತು
ದಕ್ಷಿಣಕ್ಕೆ ... ರಂಗಸ್ವಾಮಿ ಗುಡ್ಡ.

2) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ ಕೋಡು (ಪಿ.ಪಿ.8) ಖುಷ್ಕಿ ಒಂದು ಎಕರೆ

**ಜಮೀನಿಗೆ ಚಕ್ಕುಬಂದಿ**

ಪೂರ್ವಕ್ಕೆ ... ಶ್ರೀ ವೆಂಕಟಪ್ಪನವರ ಜಮೀನು.
ಪಶ್ಚಿಮಕ್ಕೆ ... ಶ್ರೀ ಮುನಿಸ್ವಾಮಯ್ಯನವರ ಜಮೀನು.
ಉತ್ತರಕ್ಕೆ ... ರಸ್ತೆ ಮತ್ತು
ದಕ್ಷಿಣಕ್ಕೆ ... ಖರೀದಿದಾರರಾದ ಶ್ರೀ ತಿರುಮಲ್ಲೇಶ್ ರವರ ಜಮೀನು.

3) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ (ಪಿ.ಪಿ.11) ಎಂ.ಆರ್.38/2003-04 ರಲ್ಲಿ ಮಾರಾಟಗಾರರ ಹೆಸರಿಗೆ ಖಾತೆಯಾಗಿರತಕ್ಕ ಖಾತೆ ನಂ.2 ಎಂದು ನಂಬರಾಗಿರತಕ್ಕ ಖುಷ್ಕಿ 20 ಗುಂಟೆ ಜಮೀನಿನ ಸ್ಥಿರ

**ಜಮೀನಿಗೆ ಚಕ್ಕುಬಂದಿ**

ಪೂರ್ವಕ್ಕೆ ... ನಿಮ್ಮ ಸ್ವಂತ ಜಮೀನು.
ಪಶ್ಚಿಮಕ್ಕೆ ... ನಿಮ್ಮ ಸ್ವಂತ ಜಮೀನು.
ಉತ್ತರಕ್ಕೆ ... ದಾಸರ ರಾಮಯ್ಯನ ಜಮೀನು.
ದಕ್ಷಿಣಕ್ಕೆ ... ಸ್ವಂತ ಜಮೀನು.

4) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ 7ನೇ ಕೋಡು (ಪಿ.ಪಿ.11) ಖುಷ್ಕಿ ಸುಮಾರು 20 ಗುಂಟೆ ಜಮೀನಿನ ಸ್ಥಿರ

**ಜಮೀನಿಗೆ ಚಕ್ಕುಬಂದಿ**

ಪೂರ್ವಕ್ಕೆ ... ನಿಮ್ಮ ಸ್ವಂತ ಜಮೀನು.
ಪಶ್ಚಿಮಕ್ಕೆ ... ನಂಜಯ್ಯನ ಜಮೀನು.
ಉತ್ತರಕ್ಕೆ ... ದಾಸರ ರಾಮಯ್ಯನ ಜಮೀನು.
ದಕ್ಷಿಣಕ್ಕೆ ... ನಿಮ್ಮ ಸ್ವಂತ ಜಮೀನು.

5) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ ಜೆ(ಪಿ.ಪಿ.13) ರಲ್ಲಿ ಇರತಕ್ಕ 4 ಎಕರೆ ಜಮೀನಿನಲ್ಲಿ ಪಶ್ಚಿಮ ಭಾಗಕ್ಕೆ 2.00 (ಎರಡು ಎಕರೆ) ಎಕರೆ ಖುಷ್ಕಿ

**ಜಮೀನಿಗೆ ಚಕ್ಕುಬಂದಿ**

ಪೂರ್ವಕ್ಕೆ ... ಇದೇ ಸರ್ವೆ ನಂಬರಿನಲ್ಲಿ ಶ್ರೀಮತಿ ಸಂಧ್ಯಾರವರಿಗೆ ಕ್ರಯ ಮಾಡಿರುವ ಆಸ್ತಿ.
ಪಶ್ಚಿಮಕ್ಕೆ ... ಮುನಿಸ್ವಾಮಯ್ಯನವರ ಜಮೀನು.
ಉತ್ತರಕ್ಕೆ ... ಇದೇ ಸರ್ವೆ ನಂಬರಿನಲ್ಲಿ ನಾನು (ಕೆ.ಎಸ್. ಮಂಜುನಾಥ್) ಉಳಿಸಿಕೊಂಡಿರುವ ಜಮೀನು.
ದಕ್ಷಿಣಕ್ಕೆ ... ರಂಗಸ್ವಾಮಿ ಗುಡ್ಡ ಕಾವಲ್.

### 2ನೇ ಪ್ರತಿವಾದಿಯ ಸ್ಥಿರಾಸ್ತಿಯ ವಿವರ

1) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ (ಪಿ.ಪಿ.13) ರಲ್ಲಿ ಇರತಕ್ಕ 4 ಎಕರೆ ಜಮೀನಿನಲ್ಲಿ ಪಶ್ಚಿಮ ಭಾಗದ 2.00 (ಎರಡು ಎಕರೆ) ಎಕರೆ ಖುಷ್ಕಿ

**ಜಮೀನಿಗೆ ಚಕ್ಕುಬಂದಿ**

ಪೂರ್ವಕ್ಕೆ ... ಕೆ.ಎಸ್. ಪ್ರಭಾಕರ್ ರವರ ಜಮೀನು.
ಪಶ್ಚಿಮಕ್ಕೆ ... ಇದೇ ಸರ್ವೆ ನಂಬರಿನಲ್ಲಿ ಶ್ರೀ ತಿರುಮಲ್ಲೇಶ್ ರವರಿಗೆ ಕ್ರಯ ಮಾಡಿರುವ ಆಸ್ತಿ.
ಉತ್ತರಕ್ಕೆ ... ಇದೇ ಸರ್ವೆ ನಂಬರಿನಲ್ಲಿ ನಾನು (ಕೆ.ಎಸ್. ಮಂಜುನಾಥ್) ಉಳಿಸಿಕೊಂಡಿರುವ ಜಮೀನು.
ದಕ್ಷಿಣಕ್ಕೆ ... ರಂಗಸ್ವಾಮಿ ಗುಡ್ಡ ಕಾವಲ್.

2) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ ಇ ಕೋಡು ಖುಷ್ಕಿ 3.00 ಎಕರೆ ಮತ್ತು ಇದೇ ಸರ್ವೆ ನಂ.52ನೇ ಎಫ್. ಕೋಡು ಖುಷ್ಕಿ 3.00 ಎಕರೆ 2 ತಾಕು ಜಮೀನು ಹಾಲಿ ಪಿ.ಪಿ.11 ಮತ್ತು ಪಿ.ಪಿ.12ನೇ ಪೋಡು ನಂಬರುಗಳಾಗಿರತಕ್ಕ ಒಟ್ಟು 6.00 ಎಕರೆ ಖುಷ್ಕಿ ಜಮೀನಿನಲ್ಲಿ 3.00 ಎಕರೆ ತೆಂಗು ಮತ್ತು ಉಳಿಕೆ 3.00 ಎಕರೆ ಖುಷ್ಕಿ ಜಮೀನಿನಲ್ಲಿ ತೆಂಗು ಇರುವುದಿಲ್ಲ ಸದರಿ

**ಜಮೀನಿಗೆ ಚಕ್ಕುಬಂದಿ**

ಪೂರ್ವಕ್ಕೆ ... ವೆಂಕಟಯ್ಯ ಮತ್ತು ಬೋರಯ್ಯನವರ ಜಮೀನು.

ಪಶ್ಚಿಮಕ್ಕೆ ... ಸದರಿ ಸರ್ವೆ ನಂಬರಿನ ಮಾಲೀಕರಾದ ವಿಜಯಮ್ಮ ರವರಿಂದ ಶ್ರೀ ತಿರುಮಲ್ಲೇಶ್ ರವರಿಗೆ ಕ್ರಯದ ಕರಾರು ಮಾಡಿಕೊಂಡಿರುವ ಜಮೀನು

ಉತ್ತರಕ್ಕೆ ... ಸರ್ಕಾರಿ ತೊರೆ ಹಳ್ಳ.

ದಕ್ಷಿಣಕ್ಕೆ ... ರಂಗಸ್ವಾಮಿ ಗುಡ್ಡ ಕಾವಲ್.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 17.02.2005 ರಂದು ನೀಡಿರುತ್ತೇನೆ.

**ಸಿ.ಎನ್. ರುದ್ರಪ್ಪ**

ಪಿ.ಆರ್. 392 ಸಹಕಾರ ಸಂಘಗಳ ಉಪನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ**

**ಸಂಕೀರ್ಣ ದಾವಾ ನಂ.220:2004-2005**

**ಉಪಸ್ಥಿತರು:** **ಎದುರು ಅರ್ಜಿದಾರರು**

ಪ್ರಭಾರ ವ್ಯವಸ್ಥಾಪಕರು, ಹೆಚ್. ನಾಗಯ್ಯ, ಬಿನ್ ಚನ್ನಬಸಯ್ಯ,

ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ. ಬೆಳಗಲು ಬಿ. ಬೀರನಹಳ್ಳಿ (ಅಂಚೆ), ಶಿವಮೊಗ್ಗ ತಾಲ್ಲೂಕು.

ಬಿ. ಬೀರನಹಳ್ಳಿ, ಶಿವಮೊಗ್ಗ ತಾ:

**ಸಂಕೀರ್ಣ ದಾವಾ ನಂ.221:2004-2005**

- ” - ಹೆಚ್.ಎನ್. ಚಿದಾನಂದಮೂರ್ತಿ ಬಿನ್ ಹೆಚ್. ನಾಗಯ್ಯ,
ಬೆಳಗಲು, ಬಿ. ಬೀರನಹಳ್ಳಿ (ಅಂಚೆ) ಶಿವಮೊಗ್ಗ ತಾಲ್ಲೂಕು.

**ಸಂಕೀರ್ಣ ದಾವಾ ನಂ.222:2004-2005**

- ” - ಹೆಚ್.ಎನ್. ಸುರೇಶ್ ಬಿನ್ ಹೆಚ್. ನಾಗಯ್ಯ,
ಬೆಳಗಲು, ಬಿ. ಬೀರನಹಳ್ಳಿ (ಅಂಚೆ), ಶಿವಮೊಗ್ಗ ತಾಲ್ಲೂಕು.

**ಸಂಕೀರ್ಣ ದಾವಾ ನಂ.223:2004-2005**

- ” - ನಾಗರತ್ನಮ್ಮ ಕೋಂ ಹೆಚ್. ನಾಗಯ್ಯ,
ಬೆಳಗಲು, ಬಿ. ಬೀರನಹಳ್ಳಿ (ಅಂಚೆ), ಶಿವಮೊಗ್ಗ ತಾಲ್ಲೂಕು.

**ಸಂಕೀರ್ಣ ದಾವಾ ನಂ.224:2004-2005**

- ” - ಹೆಚ್. ವೀರಭದ್ರಯ್ಯ ಬಿನ್ ಚನ್ನಬಸಯ್ಯ,
ಬೆಳಗಲು, ಬಿ. ಬೀರನಹಳ್ಳಿ (ಅಂಚೆ), ಶಿವಮೊಗ್ಗ ತಾಲ್ಲೂಕು.

**ಸಂಕೀರ್ಣ ದಾವಾ ನಂ.225:2004-2005**

- ” - ಹೆಚ್. ಭದ್ರಯ್ಯ, ಬಿನ್ ಚನ್ನಬಸಯ್ಯ,
ಬೆಳಗಲು, ಬಿ. ಬೀರನಹಳ್ಳಿ (ಅಂಚೆ), ಶಿವಮೊಗ್ಗ ತಾಲ್ಲೂಕು.

**ಸಂಕೀರ್ಣ ದಾವಾ ನಂ.226:2004-2005**

- ” - ಹೆಚ್. ಚಂದ್ರಯ್ಯ ಬಿನ್ ಚನ್ನಬಸಯ್ಯ,
ಬೆಳಗಲು, ಬಿ. ಬೀರನಹಳ್ಳಿ (ಅಂಚೆ), ಶಿವಮೊಗ್ಗ ತಾಲ್ಲೂಕು.

**ಸಂಕೀರ್ಣ ದಾವಾ ನಂ.227:2004-2005**

- ” - ಚನ್ನಬಸಯ್ಯ ಬಿನ್ ಭದ್ರಯ್ಯ (ಮೌತಿ)
**ವಾರಸುದಾರರು:** 1) ಹೆಚ್. ನಾಗಯ್ಯ, ಬಿನ್ ಚನ್ನಬಸಯ್ಯ
2) ಹೆಚ್. ಚಂದ್ರಯ್ಯ ಬಿನ್ ಚನ್ನಬಸಯ್ಯ,
ಬೆಳಗಲು, ಬಿ. ಬೀರನಹಳ್ಳಿ (ಅಂಚೆ), ಶಿವಮೊಗ್ಗ ತಾಲ್ಲೂಕು.

**ಸಂಕೀರ್ಣ ದಾವಾ ನಂ.228:2004-2005**

- ” - ದ್ರಾಕ್ಷಾಯಣಮ್ಮ ಕೋಂ ಚಂದ್ರಯ್ಯ,
ಬೆಳಗಲು, ಬಿ. ಬೀರನಹಳ್ಳಿ (ಅಂಚೆ), ಶಿವಮೊಗ್ಗ ತಾಲ್ಲೂಕು.

**ಸಂಕೀರ್ಣ ದಾವಾ ನಂ.229:2004-2005**

- ” - ಹೆಚ್.ಎನ್. ಪುಷ್ಪಾ ಕೋಂ ಸುರೇಶ್ ಹೆಚ್.ಎನ್.,
ಬೆಳಗಲು, ಬಿ. ಬೀರನಹಳ್ಳಿ (ಅಂಚೆ), ಶಿವಮೊಗ್ಗ ತಾಲ್ಲೂಕು.

(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತು ಆಜ್ಞೆ)

**ಪ್ರಸ್ತಾವನೆ:-**

ಅರ್ಜಿದಾರರ ಬ್ಯಾಂಕು ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ ತಂದ ವ್ಯಾಜ್ಯದಲ್ಲಿ 1ನೇ ಎದುರು ಅರ್ಜಿದಾರರು ಬ್ಯಾಂಕಿನ ವ್ಯವಸ್ಥಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ತಮ್ಮ ಕುಟುಂಬದ ಸದಸ್ಯರಿಗೆ ಸೀಮಿತವಾಗಿ ಸಾಲ ನೀಡಿದ್ದು, ಸದರೀ ಸಾಲಗಳು ಮರು ಪಾವತಿಸದೆ ಸುಸ್ತಿಯಾಗಿದ್ದು, ಅಲ್ಲದೆ ಕೆಲವು ಸಾಲಗಾರರು ಬೇರೆ ಊರಿನಲ್ಲಿ ವಾಸವಾಗಿದ್ದು ಸಾಲ ಮರುಪಾವತಿಸದೆ ಸಂಘದ ಆರ್ಥಿಕ ಅಭಿವೃದ್ಧಿಗೆ ಧಕ್ಕೆ ಉಂಟು ಮಾಡಿರುವುದರಿಂದ ಅಲ್ಲದೇ ಸದರೀ ಸಾಲಗಾರರುಗಳು ತಮ್ಮಗಳ ಸ್ಥಿರಾಸ್ತಿಗಳನ್ನು

ಮಾರಾಟ ಮಾಡುವ ಸಂಶಯವಿರುವುದರಿಂದ ವಿವಾದದಲ್ಲಿನ ಮೊತ್ತ ರೂ.1562400-00, ಇದಕ್ಕೆ ಬಡ್ಡಿ ರೂ.714917-00 ಗಳಾಗಿದ್ದು, ಸದರೀ ಸಾಲ ವಸೂಲಾತಿ ಆಗದೇ ಇರುವಂತಹ ಪರಿಸ್ಥಿತಿ ಇರುವ ಪ್ರಯುಕ್ತ ಸದರಿ ಸ್ಥಿರಾಸ್ತಿಯನ್ನು ದಾವಾ ಅರ್ಜಿಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಭಾರೆ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಬೇಕೆಂದು ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತು ಕ್ರಮ ಕೋರಿದ್ದಾರೆ. ಈ ಕೋರಿಕೆ ಯುಕ್ತವಾಗಿದೆಯೆಂದು ಸ್ವತಃ ಈ ನ್ಯಾಯಾಲಯಕ್ಕೆ ಮನವರಿಕೆಯಾಗಿದ್ದು, ಈ ಕೆಳಕಂಡ ಷರತ್ತು ಪೂರ್ವ ಜಪ್ತುಆಜ್ಞೆಯ ನೋಟೀಸನ್ನು ಹೊರಡಿಸಲಾಗಿದೆ.

**ಆದೇಶ ಕ್ರ.ಸಂ: ಸನಿಶಿ24:ಎಬಿಎನ್:ಕಲಂ 103:04-05, ದಿನಾಂಕ: 15ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಎ.ಎಸ್. ಜಯಪ್ಪ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಈ ಆದೇಶದೊಂದಿಗೆ ಇರುವ ಅನುಸೂಚಿ (ಷೆಡ್ಯೂಲ್) ಯಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ದಾವಾ ಅರ್ಜಿಯ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವಕ ಜಪ್ತುಗೊಳಿಸಲಾಗಿದೆಯೆಂದು ಆದೇಶಿಸಿದೆ.

ಎದುರು ಅರ್ಜಿದಾರರುಗಳು ತಮ್ಮ ಸ್ಥಿರಾಸ್ತಿಯನ್ನು ಷರತ್ತು ಪೂರ್ವ ಜಪ್ತು ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತುಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ಈ ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆ (ಸೆಕ್ಯೂರಿಟಿ) ಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ಶಿವಮೊಗ್ಗ ಡಿಸಿಸಿ ಬ್ಯಾಂಕ್, ಶಿವಮೊಗ್ಗ ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ರಶೀದಿ ಅಥವಾ ಬ್ಯಾಂಕಿನ ಚಲನ್ನಿನ ಪ್ರತಿಯನ್ನು ದಿನಾಂಕ: 26.3.2005 ರೊಳಗೆ ಕೆಳಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತು ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಮತ್ತು ಷರತ್ತು ಪೂರೈಸುವುದಕ್ಕೆ ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯತಕ್ಕದ್ದು.

ಈ ಆದೇಶಕ್ಕೆ ಅನುಸೂಚಿಯಲ್ಲಿನ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತು ಆಜ್ಞೆಗೆ ಒಳಪಡುವುದು ಎಂದು ಆದೇಶಿಸಿದೆ.

ಷರತ್ತು ಪೂರ್ವಕ ಜಪ್ತು ಆದೇಶಕ್ಕೆ ಒಳಗಾದ ಸ್ವತ್ತುಗಳ ಅನುಸೂಚಿ ಷೆಡ್ಯೂಲ್

| ಕ್ರ. ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ : ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1) | ಹೆಚ್. ನಾಗಯ್ಯ,<br>ಬಿನ್ ಚನ್ನಬಸಯ್ಯ | ಬೆಳಗಲು ಗ್ರಾಮ, ಹೊಳಲೂರು-11<br>ಹೋಬಳಿ, ಶಿವಮೊಗ್ಗ ತಾಲ್ಲೂಕು. | 1) ಸರ್ವೆ ನಂ.56:ಪಿ2<br>2) ಸರ್ವೆ ನಂ.58:ಪಿ5 | 7.20 ಎ.ಗು.<br>1.20 ಎ.ಗು. | ಖುಷ್ಕಿ<br>ತರಿ |
| 2) | ಹೆಚ್.ಎನ್. ಚಿದಾನಂದ ಮೂರ್ತಿ,<br>ಬಿನ್ ಹೆಚ್. ನಾಗಯ್ಯ | - ” - | 1) ಸರ್ವೆ ನಂ.65:ಪಿ3<br>2) ಸರ್ವೆ ನಂ.64:ಪಿ5 | 1.22 ಎ.ಗು.<br>0.33 ಎ.ಗು. | ತರಿ<br>ತರಿ |
| 3) | ಎಂ.ಎನ್. ಸುರೇಶ್<br>ಬಿನ್ ಹೆಚ್. ನಾಗಯ್ಯ | - ” - | 1) ಸರ್ವೆ ನಂ.58:ಪಿ2<br>2) ಸರ್ವೆ ನಂ.64:ಪಿ4 | 1.15 ಎ.ಗು.<br>0.34 ಎ.ಗು. | ಖುಷ್ಕಿ<br>ತರಿ |
| 4) | ನಾಗರತ್ನಮ್ಮ<br>ಕೋಂ ಹೆಚ್. ನಾಗಯ್ಯ | - ” - | 1) ಸರ್ವೆ ನಂ.58:ಪಿ6<br>2) ಸರ್ವೆ ನಂ.65:ಪಿ2 | 2.10 ಎ.ಗು.<br>1.00 ಎ.ಗು. | ಖುಷ್ಕಿ<br>ತರಿ |
| 5) | ಹೆಚ್. ವೀರಭದ್ರಯ್ಯ<br>ಬಿನ್ ಚನ್ನಬಸಯ್ಯ | ಬಳ್ಳಾರಿ ಜಿಲ್ಲೆ, ಕೂಡ್ಲಗಿ ತಾ:<br>ಕೊಟ್ಟೂರು ಹೋಬಳಿ, ಉಜ್ಜನಿ. | 1) ಸರ್ವೆ ನಂ.1323 | 3.00 ಎ.ಗು. | ಖುಷ್ಕಿ |
| 6) | ಹೆಚ್. ಭದ್ರಯ್ಯ<br>ಬಿನ್ ಚನ್ನಬಸಯ್ಯ | ಭದ್ರಾವತಿ ತಾ: ಮತ್ತು ಕಸಬಾ<br>ಹೋಬಳಿ, ಸಿಂಗನಮನೆ ಗ್ರಾಮ | 1) ಸರ್ವೆ ನಂ. 58:ಪಿ1 | 2.15 ಎ.ಗು. | ತರಿ |
| 7) | ಹೆಚ್. ಚಂದ್ರಯ್ಯ,<br>ಬಿನ್ ಚನ್ನಬಸಯ್ಯ | ಬಳ್ಳಾರಿ ಜಿಲ್ಲೆ, ಕೂಡ್ಲಗಿ ತಾ:<br>ಕೊಟ್ಟೂರು ಹೋಬಳಿ, ಉಜ್ಜನಿ | 1) ಸರ್ವೆ ನಂ.1323 | 3.76 ಎ.ಗು. | ಖುಷ್ಕಿ |
| 8) | ಚನ್ನಬಸಯ್ಯ,<br>ಬಿನ್ ಭದ್ರಯ್ಯ | - ” - | 1) ಸರ್ವೆ ನಂ.1318:ಡಿ<br>2) ಸರ್ವೆ ನಂ.1319:ಬಿ<br>3) ಸರ್ವೆ ನಂ.1320:ಇ | 2.38 ಎ.ಗು.<br>0.77 ಎ.ಗು.<br>2.26 ಎ.ಗು. | ”<br>”<br>” |
| 9) | ದ್ರಾಕ್ಷಾಯಣಮ್ಮ<br>ಬಿನ್ ಚಂದ್ರಯ್ಯ | ಶಿವಮೊಗ್ಗ ತಾ:<br>ಬಿ. ಬೀರನಹಳ್ಳಿ ಗ್ರಾಮ | 1) ಸರ್ವೆ ನಂ.56:ಪಿ<br>2) ಸರ್ವೆ ನಂ.56:ಪಿ | 1.00 ಎ.ಗು.<br>1.36 ಎ.ಗು. | ತರಿ<br>ತರಿ |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ದಿನಾಂಕ: 15.2.2005 ರಂದು ನೀಡಿದೆ.

ಪಿ.ಆರ್. 393 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳ ಕಛೇರಿ, ದಾವಣಗೆರೆ ಉಪವಿಭಾಗ, ದಾವಣಗೆರೆ**

**ಕ್ರಮ ಸಂಖ್ಯೆ: ವೇಆರ್-31/ದಾವಾ/ಅಮಲ್ಜಾರಿ/4/2004-05, ದಿನಾಂಕ: 14ನೇ ಫೆಬ್ರವರಿ 2005**

**ನಮೂನೆ-8**

**ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38-ಎ ಇದರ ರೀತ್ಯಾ**

**ವಿಷಯ:** ವಡ್ಡನಾಳ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಇದರ ಅಮಲ್ಜಾರಿ ಸಂಖ್ಯೆ-4/2003-04ಕ್ಕೆ ಸಂಬಂಧಿಸಿದಂತೆ ಸ್ಥಿರಾಸ್ತಿ ಮಾರಾಟವನ್ನು ಬ್ಯಾಂಕಿಗೆ ವರ್ಗಾವಣೆ ಮಾಡುವ ವಿಚಾರದ ಬಗ್ಗೆ.

**ಉಲ್ಲೇಖ:**
1) ಅಧಿಭಾರ ಅರ್ಜಿ ಸಂಖ್ಯೆ: 1/2000-01, ದಿನಾಂಕ: 26.10.2002.
2) ಅಮಲ್ಜಾರಿ ಪ್ರಕರಣ ಸಂಖ್ಯೆ: 4/2003-04.
3) ಮಾರಾಟಾಧಿಕಾರಿಗಳ ಬಹಿರಂಗ ಹರಾಜು ನಡವಳಿಕೆಯ ದಿನಾಂಕ: 11.10.2004.

4) ಮಾರಾಟಾಧಿಕಾರಿಗಳು ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ, ಹೊನ್ನಾಳಿ ಇವರ ಪತ್ರ ಸಂಖ್ಯೆ: ಸಅಅ/ಹೊ/ಇಪಿ/ವಿಲೇ/2/2003-04 ದಿನಾಂಕ: 6.11.2004 ಹಾಗೂ 31.12.2004.
5) ಈ ಕಛೇರಿಯ ಪತ್ರ ಸಂಖ್ಯೆ: ಎಆರ್-31/ಎಂಎಸ್ಐ/4/2003-04 ದಿನಾಂಕ: 8.12.2004
6) ಈ ಕಛೇರಿಯ ಅಂತಿಮ ತಿಳುವಳಿಕೆ ಪತ್ರ ಸಂಖ್ಯೆ: ಎಆರ್-31/ದಾವಾ/ಅಮಲ್ಜಾರಿ/4/2004-05, ದಿನಾಂಕ: 10.01.2005.
7) ದಾವಣಗೆರೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ದಾವಣಗೆರೆ ಇವರ ಕಾರ್ಯಕಾರಿ ಮಂಡಳಿಯ ನಡವಳಿಕೆ ದಿನಾಂಕ: 31.12.2004.

**ಪ್ರಸ್ತಾವನೆ:**

ವಡ್ಡನಾಳು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ವಡ್ಡನಾಳು, ಚನ್ನಗಿರಿ ತಾಲ್ಲೂಕು ಇದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರಡಿಯಲ್ಲಿ ನೋಂದಣಿಯಾಗಿರುತ್ತದೆ. ಈ ಬ್ಯಾಂಕಿನಲ್ಲಿ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಟಿ. ಮಲ್ಲಪ್ಪ ಇವರು ತಮ್ಮ ಅವಧಿಯಲ್ಲಿ ದುರುಪಯೋಗಪಡಿಸಿಕೊಂಡ ಬ್ಯಾಂಕಿನ ಹಣದ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 64 ರಡಿಯಲ್ಲಿ ವಿಚಾರಣೆ ನಡೆಸಿ ವಿಚಾರಣಾ ವರದಿಯಲ್ಲಿ ನಮೂದಿಸಿದ ಹಣದ ವಸೂಲಾತಿಗಾಗಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಇವರ ನ್ಯಾಯಾಲಯದಲ್ಲಿ ಸಂಕೀರ್ಣ ದಾವಾ ಸಂಖ್ಯೆ: 11/92-93 ರನ್ವಯ ಕಲಂ 70 ರಡಿಯಲ್ಲಿ ದಾವಾವನ್ನು ಹೂಡಿ ಕಾಯ್ದೆ ಕಲಂ 103 ರಡಿಯಲ್ಲಿ ಸದರಿ ಶ್ರೀ ಟಿ. ಮಲ್ಲಪ್ಪ ಹಾಗೂ ಇವರ ತಂದೆ ಶ್ರೀ ಜಿ. ಬಸಪ್ಪ ಹಾಗೂ ಸಹೋದರ ಶ್ರೀ ಟಿ. ಚಂದ್ರಪ್ಪ ಈ ಮೂವರ ಸ್ಥಿರಾಸ್ತಿಗಳನ್ನು ಸ್ವಇಚ್ಛೆ ಒಪ್ಪಿಗೆಯಿಂದ ಅಟ್ಯಾಚ್ ಮಾಡಲಾಗಿರುತ್ತದೆ.

ಅದರಂತೆ ಈ ನ್ಯಾಯಾಲಯದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 69 ರಡಿಯಲ್ಲಿ ಅಧಿಭಾರ ಪ್ರಕರಣ ಸಂಖ್ಯೆ: 1/2000-01, ದಿನಾಂಕ: 26.10.2002 ರಲ್ಲಿ ಆದೇಶವಾಗಿರುತ್ತದೆ. ಸದರಿ ಆದೇಶಗಳ ಮೇಲೆ ಅಮಲ್ಜಾರಿ ಸಂಖ್ಯೆ: 4/2003-04 ರಲ್ಲಿ ಅಮಲ್ಜಾರಿ ಕ್ರಮ ಕೈಗೊಂಡಿರುತ್ತಾರೆ. ಸದರಿ ಅಮಲ್ಜಾರಿಯಲ್ಲಿ ಈ ಹಿಂದೆ ಅಟ್ಯಾಚ್ ಮಾಡಿದ ಆಸ್ತಿಗಳೆಂದರೆ.

| ಕ್ರ.ಸಂ. | ಅಟ್ಯಾಚ್ ಮಾಡಿದ ಆಸ್ತಿಯ ವಿವರ | ವಿವರ | ವಿಸ್ತೀರ್ಣ |
|---|---|---|---|
| 01 | ಕೋಳೇನಹಳ್ಳಿ ಸರ್ವೆ ನಂ. 7/3 | ಬೆಳಗುತ್ತಿ ಹೋಬಳಿ, ಹೊನ್ನಾಳಿ ತಾಲ್ಲೂಕು. | 2.03 |
| 02 | ಕೋಳೇನಹಳ್ಳಿ ಸರ್ವೆ ನಂ. 33/1 | ಬೆಳಗುತ್ತಿ ಹೋಬಳಿ, ಹೊನ್ನಾಳಿ ತಾಲ್ಲೂಕು. | 1.30 |
| 03 | ಬೆಳಗುತ್ತಿ ಸರ್ವೆ ನಂ. 48 | ಬೆಳಗುತ್ತಿ ಹೋಬಳಿ, ಹೊನ್ನಾಳಿ ತಾಲ್ಲೂಕು. | 2.37 |

ಈ ಮೇಲ್ಕಂಡ ಸ್ಥಿರಾಸ್ತಿಗಳನ್ನು ಮಾರಾಟಾಧಿಕಾರಿಗಳು ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಹೊನ್ನಾಳಿ ಇವರು ದಿನಾಂಕ: 11.10.2004 ರಂದು ಬಹಿರಂಗ ಹರಾಜು ಇಡಲಾಗಿತ್ತು. ಸದರಿ ಹರಾಜಿನಲ್ಲಿ ಯಾರು ಬಿಡ್ಡುದಾರರು ಭಾಗವಹಿಸಿರುವುದಿಲ್ಲ. ಈ ಹಂತದಲ್ಲಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ದಾವಣಗೆರೆ ಇವರು ತಮಗೆ ವಡ್ಡನಾಳು ವ್ಯವಸಾಯ ಸೇವಾ ಸಹಕಾರ ಬ್ಯಾಂಕಿನಿಂದ ಬರಬೇಕಾದ ಬಾಕಿ ಮೊತ್ತದ ಸಂಬಂಧ ಬ್ಯಾಂಕಿನ ಪರವಾಗಿ ಚನ್ನಗಿರಿ ವೃತ್ತ ಮೇಲ್ವಿಚಾರಕರು ಹಾಜರಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 101(ಬಿ)ರ ಪ್ರಕಾರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ದಾವಣಗೆರೆ ಇದರ ಹೆಸರಿಗೆ ವರ್ಗಾವಣೆ ಮಾಡಲು ಕೋರಿರುವುದರ ಮೇರೆಗೆ ಹಾಗೂ ಈ ಬಗ್ಗೆ ಯಾವುದೇ ಆಕ್ಷೇಪಣೆಗಳು ಇಲ್ಲದಿರುವುದರಿಂದ ಸದರಿ ದಾವಾ ಸ್ಥಿರಾಸ್ತಿಗಳನ್ನು ಬ್ಯಾಂಕಿನ ಹೆಸರಿಗೆ ಮಾರುಕಟ್ಟೆ ದರಕ್ಕೆ ವರ್ಗಾವಣೆ ಮಾಡಲು ಸಹಕಾರ ಅಭಿವೃದ್ಧಿ ಅಧಿಕಾರಿಗಳು ಹೊನ್ನಾಳಿ ಇವರು ಈ ಕಛೇರಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಅದರಂತೆ ದಾವಣಗೆರೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ದಾವಣಗೆರೆ ಇವರು ದಿನಾಂಕ: 31.12.2004 ರಂದು ಬ್ಯಾಂಕಿನ ಆಡಳಿತ ಮಂಡಳಿಯ ವಿಷಯ ಸಂಖ್ಯೆ: 23 ರಲ್ಲಿ ತೀರ್ಮಾನ ಕೈಗೊಂಡು ಸ್ಥಿರಾಸ್ತಿಗಳನ್ನು ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಿಕೊಡಲು ಕೋರಿಕೊಂಡಿರುತ್ತಾರೆ.

ಈ ಮೇಲ್ಕಂಡ ಸ್ಥಿರಾಸ್ತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 101 (ಬಿ)ರ ಪ್ರಕಾರ ವರ್ಗಾವಣೆ ಮಾಡುವ ಬಗ್ಗೆ ಸಂಬಂಧಿಸಿದವರಿಗೆ ಈ ಕಛೇರಿಯಿಂದ ದಿನಾಂಕ: 10.01.2005 ರಂದು ಅಂತಿಮ ತಿಳುವಳಿಕೆ ನೋಟೀಸ್ ನೀಡಲಾಗಿತ್ತು. ಈ ಸಂಬಂಧ ಸದರಿಯವರು ಯಾವುದೇ ಆಕ್ಷೇಪಣೆಗಳನ್ನು ಸಲ್ಲಿಸಿರುವುದಿಲ್ಲ. ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಹೊನ್ನಾಳಿ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಗಣಿಸಿ ಮತ್ತು ಬ್ಯಾಂಕಿನ ಹಿತದೃಷ್ಟಿಯಿಂದ ಸದರಿ ಸ್ಥಿರಾಸ್ತಿಗಳನ್ನು ಮಾರುಕಟ್ಟೆ ದರಕ್ಕೆ ಅನುಗುಣವಾಗಿ ಸಹಕಾರ ಬ್ಯಾಂಕ್ ನಿ., ದಾವಣಗೆರೆ ಇವರ ಹೆಸರಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101 (ಬಿ) ರಡಿಯಲ್ಲಿ ವರ್ಗಾಯಿಸುವುದು ಸೂಕ್ತವೆಂದು ಭಾವಿಸಿ ಈ ಕೆಳಕಂಡಂತೆ ಆದೇಶ ಮಾಡಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101(ಬಿ) ಹಾಗೂ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/509/ಸಿಎಲ್ಎಂ/96 ದಿನಾಂಕ: 21.03.1997 ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಡಿ. ಪಾಂಡುರಂಗಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ ದಾವಣಗೆರೆ ಆದ ನಾನು ವಡ್ಡನಾಳು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ವಡ್ಡನಾಳು ಚನ್ನಗಿರಿ ತಾಲ್ಲೂಕು ಇದರ ಅಧಿಭಾರ ಅರ್ಜಿ ಸಂಖ್ಯೆ: 1/2000-01 ಬಾಬ್ತು ಅಮಲ್ಜಾರಿ ಸಂಖ್ಯೆ: 4/2003-04ರ ಪ್ರಕಾರ ಸಹಕಾರ ಕಾಯ್ದೆ ಕಲಂ 103 ರಡಿಯಲ್ಲಿ ಅಟ್ಯಾಚ್ ಮಾಡಿರುವ ಹಾಗೂ ದಿನಾಂಕ: 11.10.2004 ರಂದು ಹರಾಜು ಮಾಡಿರುವ ಸ್ಥಿರಾಸ್ತಿಗಳನ್ನು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ದಾವಣಗೆರೆ ಹೆಸರಿಗೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ತೋರಿಸಿರುವ

| ಕ್ರ. ಸಂ. | ಸ್ಥಿರಾಸ್ತಿಗಳ ವಿವರ | ಅಳತೆ (ವಿಸ್ತೀರ್ಣ) | ಮಾರುಕಟ್ಟೆ ಮೌಲ್ಯ ಎಕರೆಗೆ | ಒಟ್ಟು ಮೌಲ್ಯ |
|---|---|---|---|---|
| 1 | ಹೊನ್ನಾಳಿ ತಾಲ್ಲೂಕು, ಬೆಳಗುತ್ತಿ ಹೋಬಳಿ, ಕೋಳೇನಹಳ್ಳಿ ಸರ್ವೆ ನಂ.7/3 | 2-03 | 27000.00 | 56025.00 |
| 2 | ಹೊನ್ನಾಳಿ ತಾಲ್ಲೂಕು, ಬೆಳಗುತ್ತಿ ಹೋಬಳಿ, ಕೋಳೇನಹಳ್ಳಿ ಸರ್ವೆ ನಂ.33/1 | 1-30 | 27000.00 | 47250.00 |
| 3 | ಹೊನ್ನಾಳಿ ತಾಲ್ಲೂಕು, ಬೆಳಗುತ್ತಿ ಹೋಬಳಿ, ಬೆಳಗುತ್ತಿ ಸರ್ವೆ ನಂ.48 | 2-37 | 38000.00 | 111150.00 |
| | **ಒಟ್ಟು** | | | **214425.00** |

ಸ್ಥಿರಾಸ್ತಿಗಳನ್ನು ಒಟ್ಟು ರೂ.214425.00 (ಎರಡು ಲಕ್ಷ ಹದಿನಾಲ್ಕು ಸಾವಿರದ ನಾಲ್ಕುನೂರ ಇಪ್ಪತ್ತೈದು) ಗಳ ಮಾರುಕಟ್ಟೆ ದರ ಅನುಸಾರವಾಗಿ ಸದರಿ ಸ್ಥಿರಾಸ್ತಿಗಳನ್ನು ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಿ ಈ ಮೂಲಕ ಆದೇಶಿಸಿರುತ್ತೇನೆ.

ಈ ಸ್ಥಿರ ಸೊತ್ತಿನ ವರ್ಗಾವಣೆ ಪತ್ರವನ್ನು ಸಹಕಾರ ಕಾಯ್ದೆಯನುಸಾರ ನಮೂನೆ-8 ರಲ್ಲಿ ಪ್ರತ್ಯೇಕವಾಗಿ ಲಗತ್ತಿಸಿದೆ. ಮೇಲ್ಕಾಣಿಸಿದ ಸ್ಥಿರಾಸ್ತಿಗಳನ್ನು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ., ದಾವಣಗೆರೆ ತನ್ನ ಹೆಸರಿಗೆ ವರ್ಗಾಯಿಸಿಕೊಂಡು ಹಣ ದುರುಪಯೋಗಪಡಿಸಿಕೊಂಡಿರುವ

ಹಣವನ್ನು ತೀರುವಳಿ ಮಾಡಿಕೊಳ್ಳಲು ನಿರ್ದೇಶಿಸಿದೆ. ಹಾಗೂ ಪೂರ್ಣ ಮೊತ್ತ ಈ ಸ್ಥಿರ ಸೊತ್ತಿನ ವರ್ಗಾವಣೆಯಿಂದ ವಸೂಲಿಯಾಗದಿದ್ದಲ್ಲಿ ಸದರಿ ಶ್ರೀ ಟಿ. ಮಲ್ಲಪ್ಪ, ಮಾಜಿ ಕಾರ್ಯದರ್ಶಿ ಇವರ ಇನ್ನಿತರೆ ಚರ-ಸ್ಥಿರಾಸ್ತಿಗಳನ್ನು ಪತ್ತೆ ಮಾಡಿ ಸದರಿ ಆಸ್ತಿಗಳ, ಜಪ್ತಿ ಮಾರಾಟ, ಬಹಿರಂಗ ಹರಾಜು ಮೂಲಕ ಬಾಕಿ ಮೊತ್ತವನ್ನು ವಸೂಲಿ ಮಾಡಿಕೊಳ್ಳತಕ್ಕದೆಂದು ಆದೇಶ ಮಾಡಿದೆ.

ಈ ಆದೇಶವನ್ನು ನನ್ನ ಸ್ವ-ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ: 14.02.2005 ರಂದು ಹೊರಡಿಸಿದೆ.

ಪಿ.ಆರ್. 394 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಪ್ರಾರಂಭಿಕ ಅಧಿಸೂಚನೆ ಸಂಖ್ಯೆ: ಕೆ.ಎಸ್.ಎ. ಸಿಆರ್. 13/2004-05, ದಿನಾಂಕ: 3ನೇ ಫೆಬ್ರವರಿ 2005

ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಪುರಸಭೆಯ ಪರಿಮಿತಿಯಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿನ ವಾಸದ ಮನೆಗಳು ಒತ್ತೊತ್ತಾಗಿದ್ದು, ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ಹಾಲಿ ಇರುವ ಗುಡಿಸಲು/ಮನೆಗಳು ದುರಸ್ತಿ ಇಲ್ಲದೆ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೆ ಅನಾರೋಗ್ಯಕರ ವಾತಾವರಣ ಉಂಟಾಗಿರುವುದನ್ನು ಕೊಳಚೆ ನಿರ್ಮೂಲನಾ ಮಂಡಳಿಯು ವರದಿ ಮಾಡಿದ್ದು, ಸದರಿ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3ರ ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡು ಬರುತ್ತದೆ.

ಆದ್ದರಿಂದ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3ರ ಪ್ರಕಾರ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಶೇಷಾದ್ರಿಪುರಂ, ಬೆಂಗಳೂರು-20 ರವರಿಗೆ ಲಿಖಿತ ಮೂಲಕ ಅಂತಹ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಹದಿನೈದು (15) ದಿನಗಳ ಕಾಲಾವಕಾಶವನ್ನು ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

### ಷೆಡ್ಯೂಲ್

ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಪುರಸಭೆ ವ್ಯಾಪ್ತಿಯ ಅಂಬೇಡ್ಕರ್ ಕಾಲೋನಿ (ಮಾಂಕಾಳಮ್ಮ ತೋಟ) ಇಲ್ಲಿರುವ ಇಂದಿರಾನಗರ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ:

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸರ್ವೆ ನಂಬರ್ | ವಿಸ್ತೀರ್ಣ (ಎ.ಗುಂ.) | ಚಕ್ಕುಬಂದಿ | |
|---|---|---|---|---|---|---|
| 1 | ಅಂಬೇಡ್ಕರ್ ಕಾಲೋನಿ (ಮಾಂಕಾಳಮ್ಮನ ತೋಟ) | ಸರ್ಕಾರಿ ತೋಪು | 177 ಪೈಕಿ | 0-25 | ಪೂರ್ವಕ್ಕೆ | ಬಿ.ಡಿ.ಎ. ಲೇಔಟ್ |
| | | | | | ಪಶ್ಚಿಮಕ್ಕೆ | ಹಳ್ಳ |
| | | | | | ಉತ್ತರಕ್ಕೆ | ಹಳ್ಳ |
| | | | | | ದಕ್ಷಿಣಕ್ಕೆ | ರಿ.ಸ.ನಂ.177ರ ಉಳಿಕೆ ಜಮೀನು. |

ಎಂ.ಎ. ಸಾಧಿಕ್

ಪಿ.ಆರ್. 395 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಪ್ರಿಲಿಮಿನಿರಿ ಅಧಿಸೂಚನೆ

### ಸಂಖ್ಯೆ: ಕೆ.ಎ.ಎಸ್:ಸಿಆರ್:17/04-05, ದಿನಾಂಕ: 15ನೇ ಫೆಬ್ರವರಿ 2005

ಬೆಂಗಳೂರು ನಗರ, ನಗರಸಭೆ ಪರಿಮಿತಿಯಲ್ಲಿರುವ ಹೊಸಕೆರೆ ಹಳ್ಳಿ ಸ.ನಂ.90ರ ಪ್ರದೇಶವು ಜನಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯ ವಾತಾವರಣದಿಂದ ಕೂಡಿರುತ್ತದೆ. ಸದರಿ ಪ್ರದೇಶಕ್ಕೆ ಮೂಲಭೂತ ಸೌಕರ್ಯಗಳಿಂದ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಸೌಲಭ್ಯಗಳನ್ನು ಒದಗಿಸಲು ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ದಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯಕವೆಂದು ಕಂಡುಬರುತ್ತದೆ.

ಆದ್ದರಿಂದ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಸೆಕ್ಷನ್ 3ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಶೇಷಾದ್ರಿಪುರ, ಬೆಂಗಳೂರು-20 ರವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 (ಹದಿನೈದು) ದಿವಸಗಳವರೆಗೆ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

### ಷೆಡ್ಯೂಲ್

ಬೆಂಗಳೂರು ನಗರ ಸಭೆಯ ವ್ಯಾಪ್ತಿಯ, ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ಹೊಸಕೆರೆಹಳ್ಳಿ, ಚಾಮುಂಡಿನಗರ ಕೊಳಚೆ ಪ್ರದೇಶದ ಸ.ನಂ.90ರ ವಿಸ್ತೀರ್ಣ 0.35 ಗುಂಟೆ ವಿಸ್ತೀರ್ಣ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ

| ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಆಸ್ತಿ ಸಂಖ್ಯೆ | ವಿಸ್ತೀರ್ಣ | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
|---|---|---|---|---|---|---|---|
| ಚಾಮುಂಡಿ ನಗರ ಕೊಳಚೆ ಪ್ರದೇಶ | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ | ಸ.ನಂ.90 | 0.35 ಗುಂಟೆ | ಖಾಲಿ ಪ್ರದೇಶ ಹಳ್ಳ | ರಸ್ತೆ | ರಸ್ತೆ | ಬಿ.ಡಿ.ಎ. ಪಾರ್ಕ್ |

ಪಿ.ಆರ್. 396 ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.